# ಸಿದ್ಧಗಂಗಾ

ಸಂಪುಟ-೨೬. ಸಂಚಿಕೆ-೮. ಆಗಸ್ಟ್-೧೯೯೦.

ದೊಡ್ಡ ಮಾತುಗಳಿಂದ ಯಾರೂ ದೊಡ್ಡವರಾಗುವುದಿಲ್ಲ. ದೀನದಲಿತರ ಸೇವೆಯಿಂದ ಮಾನವೀಯ ಮೌಲ್ಯಗಳನ್ನು ಗೌರವಿಸುವುದರಿಂದ ದೊಡ್ಡವರಾಗುತ್ತಾರೆ. ಆಕರ್ಷಕವಾದ ಮಾತುಗಳ ಭಾಷಣಗಳಿಗಿಂತ ಹಸಿದ ಹೊಟ್ಟೆಗೆ ತುತ್ತು ಅನ್ನನೀಡುವಲ್ಲಿ ಸ್ವಾತಂತ್ರ್ಯದ ನೈಜಸ್ವರೂಪವಿದೆ ಎಂಬುದನ್ನು ಇಂದಿನ ರಾಜಕಾರಣಿಗಳು, ಸಮಾಜ ಸುಧಾರಕರು, ದೇಶ-ವಿದೇಶಗಳ ಯಾತ್ರೆ ಕೈಗೊಳ್ಳುತ್ತಿರುವ ಸಚಿವರು ಅರ್ಥಮಾಡಿಕೊಳ್ಳುವ ಅಗತ್ಯ ತೀವ್ರವಾಗಿದೆ.

ಶ್ರೀ ಶ್ರೀ ಶಿವಕುಮಾರಸ್ವಾಮಿಗಳು.

ಪ್ರಕಾಶಕರು:
ಹಳೆಯ ವಿದ್ಯಾರ್ಥಿಗಳ ಸಂಘ.
ಸಿದ್ಧಗಂಗಾ ಕ್ಷೇತ್ರ.

# ಸಿದ್ಧಗಂಗಾ

ಸಂಪುಟ-೨೬ ಸಂಚಿಕೆ-೮. ಆಗಸ್ಟ್-೧೯೯೦

## ಶ್ರೀ ಸಿದ್ಧಗಂಗಾ ಗುರುಕರುಣ ತ್ರಿವಿಧಿ

"ಅನುಭಾವದೀಪ್ತಿ"ಯೆ "ನೆಲದಕೈಲಾಸ"ವೆ
"ಶಾಂತಿ ಶೀತಲ" ತುಂಬಿಹ ಬೆಳುದಿಂಗಳೆ। ಪೊಡಮಡುವೆ
ಸಿದ್ಧಗಂಗಾ ಗುರುವೆ ಕೃಪೆಯಾಗು!

ಶ್ರೀ"ದಿವ್ಯಭವ್ಯವೆ" ಶ್ರೀ ವಿಶ್ವಪುಣ್ಯವೆ
ಶ್ರೀ ಶರಣಕಿರಣವ ಬೆಳಗಿರುವ। ಶ್ರೀ ಗುರುವೆ
ಸಿದ್ಧಗಂಗಾ ಗುರುವೆ ಕೃಪೆಯಾಗು॥

"ನಿತ್ಯನಿರ್ಮಲವೆ ನಿರವಯವೆ" ಜಂಗಮವೆ
"ಬೆಳಗು ಬೆಳಗಿನ ಬೆಳಗೆ" ಶಿವಬೆಳಗೆ। ಪೊಡಮಡುವೆ
ಸಿದ್ಧಗಂಗಾ ಗುರುವೆ ಕೃಪೆಯಾಗು॥

ಹೆಚ್. ವಿ. ವೀರಭದ್ರಯ್ಯ

| ಲೇಖನ | ಲೇಖಕರು | ಪುಟ |
|---|---|---|
| * ಶ್ರೀವಾಣಿ | | 5 |
| * ಶ್ರೀ ಸಿದ್ಧಲಿಂಗೇಶ್ವರ ವಚನ | | 7 |
| * ಸಂಪಾದಕೀಯ | | 9 |
| * ಧಾರ್ಮಿಕ ರಂಗದಲ್ಲಿ ಬಸವನ ವಿಚಾರವಾದ | ಕೃಪೆಶರಣಧರ್ಮ | 11 |
| * ಸ ಹ ವಾ ಸ | ಗೊ. ರು. ಚನ್ನಬಸಪ್ಪ | 14 |
| * ನೈತಿಕ ಶಿಕ್ಷಣ | ಶ್ರೀ ಸೋಮಶೇಖರ್ ಎಂ.ಕಾಂ., | 16 |
| * ಕೇರಳದ ಸಂತ-ಸಮಾಜ ಸುಧಾರಕ, ಶ್ರೀ ನಾರಾಯಣ ಗುರುದೇವ್ | ಎಂ. ಎಸ್. ಲಕ್ಷ್ಮಣಾಚಾರ್. | 19 |
| * ವಿದ್ಯಾರ್ಥಿ ಜೀವನದ ಬೆಳಕು ಸರಣಿ. ಲೇಖನ-೨. | ಬಿ. ಎಸ್. ಕೃಷ್ಣಮೂರ್ತಿ. | 26 |
| * ಮಾನವೀಯ ಮೌಲ್ಯ ಶಿಕ್ಷಣ | ಹೆಚ್. ಎಸ್. ನರಸಿಂಹಜೀಯರ್. | 28 |
| * ಅಣುಯುಗದ ಭಯಂಕರ ಕೊಲೆಗಾರ. | ಬಿ. ಸುಬ್ರಾಯ ಅಡಿಗರು, | 31 |
| * ಕನಸಿನ ಕನ್ಯೆ ವೈಜ್ಞಾನಿಕ ಕಿರುಧಾರಾವಾಹಿ-7 | ಪ. ರಾಮಕೃಷ್ಣ ಶಾಸ್ತ್ರಿ. | 34 |
| * ಶ್ರೀ ಶ್ರೀಗಳವರ ಈ ತಿಂಗಳ ಕಾರ್ಯಕ್ರಮಗಳು | | 40 |


# ಶ್ರೀ ವಾಣಿ

## ಜೀವನವೇ ಯೋಗ

ಜ್ಞಾನಿಗಳು ಜೀವನವನ್ನು ನೋಡುವ ದೃಷ್ಟಿಗೂ, ಸಾಮಾನ್ಯರು ನೋಡುವ ದೃಷ್ಟಿಗೂ ಅಂತರವಿರುತ್ತದೆ. ಲೋಕದ ಸಮಸ್ತ ಸಂಪತ್ತನ್ನು ಸಮಷ್ಟಿ ಬದುಕಿನ ಕಲ್ಯಾಣಕ್ಕಾಗಿ ಹೇಗೆ ಬಳಸಬಹುದು ಎಂಬ ಚಿಂತೆ ಜ್ಞಾನಿಗಳದಾದರೆ ವೈಯಕ್ತಿಕ ಸುಖಸಾಧನೆಗಾಗಿ ಬಳಸುವುದು ಹೇಗೆ ಎಂಬ ಲೆಕ್ಕಾಚಾರ ಸಾಮಾನ್ಯರದಾಗಿರುತ್ತದೆ. ಯೋಗವೆಂಬುದನ್ನು ಜೀವನದಿಂದ ಪ್ರತ್ಯೇಕಿಸಿ ನೋಡುವ ದೃಷ್ಟಿ ಅದು ಹೇಗೋ ಬೆಳೆದುಬಂದಿದೆ. ಜಗತ್ತನ್ನು ಮಿಥ್ಯವೆಂದು ಒಪ್ಪದೆ ಸತ್ಯವೆಂದು ಪರಿಭಾವಿಸಿದ ಶರಣರು "ಮರ್ತ್ಯವೆಂಬುದು ಕರ್ತಾರನ ಕಮ್ಮಟ"ವೆಂದುನಂಬಿ ಬಾಳಿದರು, ಸಂಸಾರವನ್ನು ಶಿವಯೋಗವಾಗಿ ಮಾರ್ಪಡಿಸಿದರು. ಇಹ-ಪರವೆಂಬ ವಿಭಾಗ ಅವರಿಗೆ ಒಪ್ಪದಾದ ಮಾತು. ನಿತ್ಯದ ಬದುಕನ್ನೇ ಸತ್ಯ ಶುದ್ಧವಾಗಿ ಬಾಳುತ್ತ, ತಮ್ಮ ಬಾಳು ಶಿವನಿತ್ತ ಪ್ರಸಾದವೆಂದು ಭಾವಿಸಿದ ಶರಣರು ಕಾಯವನ್ನು ಉದಾತ್ತ ದೃಷ್ಟಿಯಿಂದ ಕಂಡು "ಕೂಡಲಸಂಗನ ಒಲಿಸಲು ಬಂದ ಪ್ರಸಾದ ಕಾಯವ ಕೆಡಿಸಲಾಗದು" ಎಂಬ ಅಖಂಡ ನಿಷ್ಠೆಯಿಂದ ಬಾಳಿದರು. ತಮ್ಮಕಾಯಕವೇ ತಮಗೆ ಶ್ರೇಷ್ಠ-ಗುರುಲಿಂಗ, ಜಂಗಮವೆಂದು ನಂಬಿನಡೆದರು. ಶರಣರ ದೃಷ್ಟಿಯಲ್ಲಿ ಜೀವನಕ್ಕಿಂತ ದೊಡ್ಡಯೋಗವಿಲ್ಲ. "ಮಾಡುವ ಮಾಟದಿಂದಲೇ ಬೇರೊಂದನ್ನು ಅರಿಯಬೇಕು." ಅಹಂಕಾರ ಮಮಕಾರಗಳನ್ನು ಬಿಟ್ಟು ಮಾಡುವ ಪ್ರತಿಯೊಂದು ಕೆಲಸವೂ ಯೋಗವೇ "ನಮ್ಮದೆನ್ನುವ ಬದುಕು ಸೊಮ್ಮು ಶಿವನದು ಕಾಣೋ" ಎಂಬ ಗ್ರಾಮೀಣರ ನಂಬಿಕೆಯಲ್ಲಿ ಯೋಗದ ರಹಸ್ಯವಡಗಿದೆ. ಜೀವನದಿಂದ, ಸಂಸಾರದಿಂದ ದೂರವಾಗಿ ಮಾಡುವಯೋಗಕ್ಕಿಂತ ಜೀವನದಲ್ಲಿಯೇ ಇದ್ದು "ಮಂದಿಮಕ್ಕಳೊಂದಿಗೆ ಚೆಂದಾಗಿ" ಬಾಳುತ್ತ "ಎಲ್ಲರೊಳಗೊಂದಾಗಿ" ಬದುಕುವ ಕಲೆಯೇ ನಿಜವಾದಯೋಗ. ಅಂಥಯೋಗವೇ ಜೀವನ. ಹಾಗೆ ಜೀವನ್ನ ಯೋಗವಾಗುವುದಕ್ಕೆ ಕಾಯಕವೇ ಸೋಪಾನ.

## ಸತ್ಯಂ ಶಿವಂ ಸುಂದರಂ

ಅಂದ ಚೆಂದಗಳು ಸತ್ಯವಲ್ಲವೇ? ಅದೂ ದೈವೀ ಸೃಷ್ಟಿಯೇತಾನೆ! ಸುಮಧುರ ಸಂಗೀತ ಕೇಳಿದಾಗ ನಮ್ಮ ಮನಸ್ಸು ಮೊಗ್ಗಾಗಿ ಮುದುಡಿ ಕೊಳ್ಳುತ್ತದೆ; ಆ ಚೆಲುವಿನಲ್ಲಿ ಸತ್ಯವಿಲ್ಲವೇ? ಇರದಿದ್ದರೆ ತಾನೇ ಏನುನಷ್ಟ? ಕಲಾವಿದರೆಲ್ಲ **"ರಸಾನಂದವೇ ಕಲೆಯ ಗುರಿ."** ಎಂದಿದ್ದಾರೆ. ರಮಣೀಯಾರ್ಥ ಪ್ರತಿಪಾದನೆಯೇ ಕಲೆ ಎಂದಿದ್ದಾರೆ. ಚೆಲುವಿನಲ್ಲಿ ಸತ್ಯ ಕಾಣದೇ? ಸತ್ಯವು ಶಿವನಲ್ಲವೇ? ಶಿವನ ಪ್ರತಿಬಿಂಬವೇ ಸೌಂದರ್ಯವಲ್ಲವೇ?

### ನಿಜವಾದ ಕಲೆ

ಜೀವನವು ಸಮಸ್ತ ಕಲೆಗಳಿಗಿಂತ ಶ್ರೇಷ್ಠವಾದುದು. ಯಾರು ಉತ್ತಮ ರೀತಿಯಲ್ಲಿ ಬಾಳಬಲ್ಲರೋ ಅವರೇ ಉತ್ತಮ ಕಲಾವಿದರು. ಉತ್ತಮ ಜೀವನದ ತಳಹದಿ ಇಲ್ಲದೇ ಕಲಾಕೃತಿ ಹೇಗೆ ಆದೀತು.?

ಬಾಳನ್ನು ಹಸನು ಮಾಡುವದು, ಮೇಲು ಮಟ್ಟಕ್ಕೆ ಏರಿಸುವದೇ ಕಲೆಯ ಬೆಲೆ. ಜೀವನವೇ ಶ್ರೇಷ್ಠ ಕಲೆ. ಕಲೆ ಜೀವನವನ್ನೂ ವಿಶ್ವವನ್ನೂ ಅರಿತಿರಬೇಕಲ್ಲದೇ ಅದರ ರಸವನ್ನೂ ಹೀರಬೇಕು. ಬಾಳಿನ ತಪಸ್ಸೇ ಇದಕ್ಕೆ ಪ್ರಧಾನ, ತಪೋಜೀವನವೇ ನಿಜವಾದ ಕಲೆ.

### ಕಲೆ ಮಾನವನ ವಿಕಾಸದ ಸಾಧನ

ಜೀವಿಗೆ ತನ್ನ ಅಂತರಾತ್ಮದರ್ಶನ ಮಾಡಿಸಿ ಕೊಡಲು ನೆರವಾಗದ ಕಲೆ ಕಲೆಯಲ್ಲ. ಕಲಾ ಸಾಮಗ್ರಿ ಎನಿಸುವ ಹೊರಗಣ ರೂಪ ವಸ್ತುಗಳ ಸಹಾಯ ಆತ್ಮ ಸಾಧನೆಗೆ ಅಗತ್ಯವಿಲ್ಲ.

ನಿಗಸರ್ಗದ ರಮಣೀಯ ದೃಶ್ಯಗಳನ್ನು ಸತ್ಯ ರೂಪದಲ್ಲಿ ಯಾವಮಾನವ ಕಲಾಕೃತಿಯು ಕೊಡಬಲ್ಲದು? ಅಂದರೆ ನಿಸರ್ಗ ಸೌಂದರ್ಯದ ಚಿರಂತನ ಪ್ರತೀಕಗಳೆದುರು ಇವು ಅಷ್ಟು ನಿಸ್ಸಾರವೆಂದಲ್ಲ. ಮಾನವ ಕಲಾ ಕೃತಿಗೆ ಬೆಲೆ ಸಿಕ್ಕಬೇಕಾದರೆ ಅವು ಆತ್ಮವಿಕಾಸಕ್ಕೆ ಸಹಾಯವಾಗಬೇಕು.

ಸರ್ವೋತ್ಕೃಷ್ಟವಾದ ಕಲೆಯು ಸರ್ವ ಭೋಗ್ಯವೂ, ಮಾನವ ವಿಕಾಸದ ಸಾಧನವೂ ಆಗಿರುತ್ತದೆ.

ಮಹಾತ್ಮ ಗಾಂಧಿಜೀ.

## ಶ್ರೀ ಸಿದ್ಧಲಿಂಗೇಶ್ವರ ವಚನ



ಮುಚಿದ ಕಣ್ಣು ತೆರೆದುದ ಕಂಡೆ,
ಕಿಚ್ಚಿನ ಜ್ವಾಲೆ ಕರೆವುದ ಕಂಡೆ,
ಮತ್ಯುಗಳ ಮೊತ್ತ ಕಿತ್ತೊಡುವುದ ಕಂಡೆ
ಕತ್ತಲೆ ಬೆಳಗಾದುದ ಕಂಡೆ
ಬಿಚ್ಚಿ ಬೇರಿಲ್ಲದ ಬೆಳಗೆನ್ನನೊಳಕೊಂಡು
ನಿತ್ಯ ಪ್ರಸನ್ನನಾದೆನಯ್ಯಾ
ಮಹಾಲಿಂಗ ಗುರು ಶಿವಸಿದ್ದೇಶ್ವರ ಪ್ರಭುವೇ.

ಜ್ಞಾನದ ಕಣ್ಣನ್ನು ಲೋಕದ ಆಶೆ ಆಕಾಂಕ್ಷೆಗಳು ಮುಚ್ಚಿಕೊಂಡು ಆ ಕಣ್ಣು ತೆರೆಯದ ಹಾಗೆ ಇರುವಾಗ, ಶ್ರೀ ಗುರುವಿನ ಉಪದೇಶ ಅದು ತೆರೆಯುವಂತೆ ಮಾಡಿದೆ. ಚಿದಗ್ನಿ ಸ್ವರೂಪವಾದ ಪರ ಶಿವಲಿಂಗದ ಚಿತ್ರಾಕಾಶ ಸರ್ವಾಂಗಲಿಂಗ ಸಂಬಂಧಿಯಾದುದನ್ನು ಸ್ವಾನುಭವ ಗುರೂಪದೇಶ ಅರಿತಿದೆ. ಹಾಗೆಯೇ ಸರ್ವಾಂಗ ಲಿಂಗ ಸಂಬಂಧಿಯಾದ ಶರಣನ ಅಪಮೃತ್ಯು ಕಾಲಮೃತ್ಯುಗಳು ದೂರಸರಿಯುವುದನ್ನು ಜ್ಞಾನನೇತ್ರ ಕಂಡಿದೆ. ಅಂಥ ಶರಣನಿಗೆ ವೃತ್ತಿ ಜ್ಞಾನವಳಿದು ಪೂರ್ಣ ಜ್ಞಾನಪ್ರಾಪ್ತವಾಗಿದೆ. ಆ ಜ್ಞಾನ ಪ್ರಕಾಶ ಆ ಶರಣನ ಸರ್ವಾಂಗದಲ್ಲಿ ವ್ಯಾಪಿಸಿ ಅವನು ಶಾಶ್ವತ ಪರಬ್ರಹ್ಮ ಸ್ವರೂಪಿಯಾಗಿ ಬೆಳಗುತ್ತಿದ್ದಾನೆ-ಎನ್ನುತ್ತದೆ ವಚನ.

ಸಿದ್ಧಗಂಗಾ ಮಾಸ ಪತ್ರಿಕೆ
ಶ್ರೀ ಸಿದ್ಧಗಂಗಾ ಮಠ-572 104
ತುಮಕೂರು ಜಿಲ್ಲೆ.

ಪ್ರಧಾನ ಸಂಪಾದಕರು
ಪ್ರಾ॥ ಚನ್ನಪ್ಪ ಎರೇಸೀಮೆ

* * *

ಸಂಪಾದಕರು
ಹೆಚ್. ವಿ. ವೀರಭದ್ರಯ್ಯ

* * *

ಸಹ ಸಂಪಾದಕರು
ಬಿ. ವೀರಭದ್ರಯ್ಯ
ಪಿ. ಎನ್. ಚಂದ್ರಶೇಖರಯ್ಯ

* * *

ಜಾಹೀರಾತು ವಿಭಾಗ
ಎಂ. ರೇಣುಕಾರಾಧ್ಯ

* * *

ವಿತರಣೆ ವಿಭಾಗ
ಆರ್. ಎಸ್. ಮಲ್ಲೇಶಪ್ಪ

* * *

ಪ್ರಕಾಶಕರು
ಹೆಚ್. ಬಿ. ಗಂಗಾಧರಯ್ಯ
ಹಳೆಯ ವಿದ್ಯಾರ್ಥಿ ಸಂಘದ ಪರವಾಗಿ

* * *

ಮುದ್ರಕರು
ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಮುದ್ರಣಾಲಯ

* * *

ಪ್ರಕಟಣೆಯ ಸ್ಥಳ
ಶ್ರೀ ಸಿದ್ಧಗಂಗಾ ಕ್ಷೇತ್ರ

ಚಂದಾ ವಿವರ
ವಾರ್ಷಿಕ ಚಂದಾ 20-00 ರೂ
ಅಜೀವ ಸದಸ್ಯತ್ವ 250-00 ರೂ

### ಲೇಖಕರಲ್ಲಿ ಮನವಿ

'ಸಿದ್ಧಗಂಗಾ' ಶ್ರೀ ಸಿದ್ಧಗಂಗಾ ಮಠದಿಂದ ಪ್ರಕಟವಾಗುತ್ತಿರುವ ಮಾಸ ಪತ್ರಿಕೆ. ಶ್ರೀ ಮಠದ ಹಳೆಯ ವಿದ್ಯಾರ್ಥಿ ಸಂಘದ ಹೆಮ್ಮೆಯ ಸೇವಾ ಪುರವಣೆ, ಮೇಲಾಗಿ ಶ್ರೀ ಮಠದ ಮುಖವಾಣಿ, ಪೂಜ್ಯ ಶ್ರೀ ಶ್ರೀ ಡಾ॥ ಶಿವಕುಮಾರ ಮಹಾಸ್ವಾಮಿಗಳವರ ದಿವ್ಯ ಮಾರ್ಗದರ್ಶನದಲ್ಲಿ ಮುನ್ನಡೆದಿರುವ ಪತ್ರಿಕೆ. ತ್ರಿವಿಧ ದಾಸೋಹ ಸೇವಾ ತತ್ಪರತೆಯಿಂದ ಹೆಜ್ಜೆ ಹಾಕುತ್ತಿದೆ. ಈ ಧ್ಯೇಯ ಸಾಧನೆಗಾಗಿ ನಾಡಿನ ಗಣ್ಯ ಲೇಖಕರಿಂದ ಸಾಹಿತ್ಯ, ಸಂಸ್ಕೃತಿ, ಧರ್ಮ, ವಿಜ್ಞಾನ, ಶಿಕ್ಷಣ. ಇತಿಹಾಸ, ವೈಚಾರಿಕ, ಚಿಂತನ ಮುಂತಾದ ಲೇಖನಗಳನ್ನು ಸ್ವಾಗತಿಸುತ್ತದೆ. ಅಸ್ವೀಕೃತ ಲೇಖನಗಳನ್ನು ಪಡೆಯಲು ಸಾಕಷ್ಟು ಅಂಚೆಸ್ಟಾಂಪುಗಳನ್ನು ಲಗತ್ತಿಸಿರಬೇಕು. ಲೇಖನಗಳಲ್ಲಿ ಸೂಕ್ತ ಬದಲಾವಣೆ ಮಾಡಿಕೊಳ್ಳುವ ಅಧಿಕಾರ ಸಂಪಾದಕರಿಗಿದೆ: ಅನುವಾದ, ರೂಪಾಂತರ ಲೇಖನಗಳಿಗೆ ಮೂಲ ಕೃತಿಕಾರರ ಅನುಮತಿ ಪಡೆದಿರಬೇಕು ಸ್ವೀಕೃತ ಲೇಖನಗಳಿಗೆ ಸೂಕ್ತ ಸಂಭಾವನೆ ಕೊಡಲಾಗುವುದು.

" ಸಂಪಾದಕರು "
'ಸಿದ್ಧಗಂಗಾ' ಕನ್ನಡ ಮಾಸಪತ್ರಿಕೆ
ಶ್ರೀ ಸಿದ್ಧಗಂಗಾ ಕ್ಷೇತ್ರ-572 104
ತುಮಕೂರು ಜಿಲ್ಲೆ.
ಇವರಿಗೆ ಕಳುಹಿಸಿಕೊಡಬೇಕಾಗಿ ಪ್ರಾರ್ಥನೆ

# ಸಂಪಾದಕೀಯ

## ಸ್ವಾತಂತ್ರ್ಯ ದಿನಾಚರಣೆ

ಶಾಲಾ ಕಾಲೇಜುಗಳ ವಾರ್ಷಿಕೋತ್ಸವದ ಮಟ್ಟಕ್ಕೆ ಇಳಿಯುತ್ತಿರುವ ರಾಷ್ಟ್ರೀಯ ಹಬ್ಬಗಳಾದ ಸ್ವಾತಂತ್ರ್ಯ ದಿನಾಚರಣೆ ಮತ್ತು ಗಣತಂತ್ರ ದಿನಾಚರಣೆಗಳು ಭಾರತೀಯರ ರಾಷ್ಟ್ರ ಪ್ರಜ್ಞೆಯ ಅಭಾವಕ್ಕೆ ಸದ ಉದಾಹರಣೆಗಳಾಗಿವೆ ಎಂದರೆ ತಪ್ಪಾಗವೇನೋ: ಉತ್ಸಾಹ ಶೂನ್ಯ. ಬಂಜೆ ಭಾಷಣಗಳ, ಅಂತರರಗ ಬಹಿರಂಗ ಸಾಮರಸ್ಯವಿಲ್ಲದ, ಕೃತ್ರಿಮ ದೇಶ ಭಕ್ತಿಯ, ಸ್ವಾರ್ಥನಾಯಕರುಗಳ ಬೂಟಾಟಿಕೆಯ ನಾಟಕ ನಡೆದಿರುವುದನ್ನು ಕಂಡು ಕಣ್‌ಬಿಡುತ್ತಿರುವ ಕೂಸು ಕೂಡಾ ಕಣ್ಣೀರು ಸುರಿಸುತ್ತಿದೆ. ಸ್ವಾತಂತ್ರ್ಯ ತಂದು ಕೊಟ್ಟ ಉದಾತ್ತ ದೇಶಭಕ್ತರು ಕಂಡಕನಸೇನು? ನಡೆದಿರುವ ಹುನ್ನಾರ, ವೇನು? ನಾಯಕರುಗಳ ಜೀವನ ವಿಧಾನ ಅಸಹ್ಯವೆನಿಸುವಷ್ಟು ಕಲುಷಿತವಾಗಿದೆ. ದೇಶಪ್ರೇಮ ಕಾಗದದ ಮೇಲಿನ ಅಕ್ಷರನಾಟ್ಯವಾಗಿದೆ. ಸಮಸ್ಯೆಗಳ ಸೃಷ್ಟಿಯಂತೂ ಲೆಕ್ಕವಿಲ್ಲದಷ್ಟು. ಕಂಬಂಧ ಬಾಹುವಿನಂತೆ ಬಾಚಿ ತಬ್ಬಿದೆ, ತಬ್ಬುತ್ತಲಿದೆ ಅರ್ಧಶತಮಾನದ ಹತ್ತಿರ ಬಂದರೂ ಸ್ವಾತಂತ್ರ್ಯದ ಫಲವನ್ನು ಭಾರತೀಯ ಅನುಭವಿಸುವ ಭಾಗ್ಯ ಬರಲಿಲ್ಲ. ರಾಜಕಾರಣಿಗಳ ಚಾಣಾಕ್ಷ ಬುದ್ಧಿ ಪಂಜಾಬ್, ಕಾಶ್ಮೀರ, ಶ್ರೀಲಂಕಾ, ಶ್ರೀ ರಾಮ ಜನ್ಮಭೂಮಿ, ಬಾಬರಿ ಮಸೀದಿ, ಬೋಫೋರ್ಸ್ ಹಗರಣ. ಫೋನ್ ಕದ್ದಾಲಿಕೆ, - ಇತ್ಯಾದಿಗಳನ್ನು ಜೀವಂತವಾಗಿ ಉಳಸಿಕೊಳ್ಳುವಲ್ಲಿಯೇ ಆಸಕ್ತವಾಗಿದೆ. ಸಚಿವೋಪಸಚಿವರುಗಳ ವಿದೇಶಯಾತ್ರೆ ಅವ್ಯಾಹತವಾಗಿ ನಡೆದೇ ಇದೆ, ಶ್ರೀ ಸಾಮಾನ್ಯನ ಬವಣೆ ಬೆಳೆಯುತ್ತಲೇ ಇದೆ. ದಿನನಿತ್ಯದ ಜೀವನ ಕಣ್ಣೀರಿನ ಕಾಲುವೆಯಾಗುತ್ತಿದೆ. ಸೀಮೆ ಎಣ್ಣೆಗೆ ಅಭಾವ, ವಿದ್ಯುತ್ ಖೋತಾ, ಬಸ್ಸುಧರದಲ್ಲಿ ಹೆಚ್ಚಳ, ಪಡಿತರ ಅಂಗಡಿಯ ಅಕ್ಕಿಯ ಬೆಲೆ ದುಬಾರಿ, ಶಾಲಾ ಕಾಲೇಜುಗಳ ಶುಲ್ಕ ಶ್ರೀಮಂತಿಕೆ, ಈ

ಪಟ್ಟಿಗೆ ಕೊನೆಯೇ ಇಲ್ಲ. ಇಷ್ಟಾಗಿಯೂ "ಝಂಡಾ ಉಂಛಾರಹೇಹಮಾರಾ" ಅಭಿಮಾನದಿಂದ ಭಾರತದ ಮಕ್ಕಳು ಹಾಡುತ್ತಲೇ ಇದ್ದಾರೆ. ಮಂತ್ರಿಗಳ ಮುಕ್ತಾ ಫಲಗಳು ಉದುರುತ್ತಲೇ ಇವೆ. 'ಎತ್ತೆತ್ತ ನೋಡಿದಡತ್ತತ್ತ, ಭ್ರಷ್ಟಾಚಾರ, ದೇಶಾಚಾರ, ಸದಾಚಾರ,' ವಿಚಾರ ಸಂಚಾರ ಹೊರಟಿದೆ. ಅಭಿನಯ ಶಿರೋಮಣಿಗಳಂತೆ ನಮ್ಮ ಶಾಸಕರು, ಸ್ವಾತಂತ್ರ್ಯ ದಿನಾಚರಣೆ ಎಂಬ ನಾಟಕದ ಮುಖ್ಯ ಪಾತ್ರ ಧಾರಿಗಳಾಗಿ ರಂಜಿಸುತ್ತಿದ್ದಾರೆ. ಹೃದಯ ಎಂಬುದೇನಾದರೂ, ಆತ್ಮ ಸಾಕ್ಷಿ ಎಂಬುದೇನಾದರೂ ಇವರಿಗೆ ಇದೆಯೇ ಎಂದು ಕೇಳುವ ಹೊಸ ಪೀಳಿಗೆ ಇಂದು ಮುಂದೆ ಬರಬೇಕಾಗಿದೆ. ಹಳ್ಳಿ ಹಳ್ಳಿಗಳೆಲ್ಲ ಕೆಟ್ಟ ರಾಜಕಾರಣದ ಅಗ್ನಿಕುಂಡದಲ್ಲಿ ಭಸ್ಮವಾಗುತ್ತಿವೆ. ಪಾಳ್ಯಗಳೆಲ್ಲ ಬೂದಿಯಾಗುತ್ತಿವೆ. ಪವಿತ್ರ ರಾಷ್ಟ್ರಧ್ವಜದಡಿಯಲ್ಲಿ ಪ್ರಮಾಣ ಬದ್ಧರಾಗುತ್ತಿದ್ದಾರೆ. ದೇಶಕ್ಕಿಂತ ದೊಡ್ಡದು ಯಾವುದೂ ಇಲ್ಲನೆಂದು. ಆದರೆ ದೇಶವಿರುವುದೇ ತಮಗಾಗಿ ಎಂದು ನಡೆದುಕೊಳ್ಳುತ್ತಿದ್ದಾರೆ. ಮಾತು ಕೃತಿಗಳಲ್ಲಿ ಏಕತೆಯಿರದ ನಮ್ಮ ಸ್ವಾತಂತ್ರ್ಯ ದಿನಾಚರಣೆಗೆ ಅರ್ಥವೇನಾದರೂ ಉಂಟೆ ?

ಸ್ವಾತಂತ್ರ್ಯ ಬಂದು ಬಹಳ ವರ್ಷಗಳಾದರೂ ನಾವು ನಿರೀಕ್ಷಿಸಿದ ಗುರಿಯನ್ನು ಮುಟ್ಟಲಾಗಿಲ್ಲ. ಅನೇಕ ವಿಧವಾದ ಕಾರ್ಯ ಸಾಧನೆಯನ್ನು ಮಾಡಿದ್ದೇವೆ. ಮಾಡಬೇಕಾಗಿರುವುದನ್ನು ವಿಮರ್ಶಿಸಿದಾಗ ಗುರಿ ಜನತೆಯ ಮಟ್ಟವನ್ನು ಮುಟ್ಟಬೇಕಾಗಿತ್ತು ಎನ್ನಿಸುತ್ತದೆ, ಆದರೆ ಜನರ ಬಯಕೆಗಳನ್ನು ಪೂರ್ತಿಗೊಳಿಸಲು ಇಂದೂ ಸಾಧ್ಯವಾಗಿಲ್ಲ, ಸಮರ್ಥವಾಗಿಲ್ಲ. ಎಲ್ಲೆಲ್ಲೂ ಮಂಕು ವಾತಾವರಣ, ನಿರುತ್ಸಾಹ, ಆಹಾರದ ಅಭಾವ, ಅಜ್ಞಾನ, ಅಶಾಂತಿ, ಗೊಂದಲ ತಾಂಡವಾಡುತ್ತಿದೆ. ಭಾರತ ಯಾವ ಸ್ವಾರ್ಥವನ್ನ ಹತ್ತಿಕ್ಕಿತ್ತೋ, ತೊಡೆದುಹಾಕಿತ್ತೋ ಅದೇ ಇಂದು ಬೃಹದಾಕಾರವಾಗಿ ಮುಂದಾಗಿ ಮೈ-ಕೊಡವಿ ರಾಕ್ಷಸನಂತೆ ಎದ್ದು ಹಾಹಾಕಾರವನ್ನು ಮಾಡುತ್ತಿರುವುದನ್ನು ನಾವು ಕಾಣುತ್ತೇವೆ.



# ಧಾರ್ಮಿಕ ರಂಗದಲ್ಲಿ ಬಸವನ ವಿಚಾರವಾದ.

— ಶರಣ ಸಂದೇಶ —

" ಭಕ್ತಿಯೆಂಬ ಪೃಥ್ವಿಯಮೇಲೆ ಗುರುವೆಂಬ ಬೀಜವಂಕುರಿಸಿ
ಲಿಂಗವೆಂಬ ಎಲೆಯಾಯಿತ್ತು ,
ಲಿಂಗವೆಂಬ ಎಲೆಯಮೇಲೆ :
ವಿಚಾರವೆಂಬ ಹೂವಾಯಿತ್ತು,
ಆಚಾರವೆಂಬ ಕಾಯಾಯಿತ್ತು,
ನಿಷ್ಪತ್ತಿಎಂಬ ಹಣ್ಣಾಯಿತ್ತು,
ಆ ನಿಷ್ಪತ್ತಿಎಂಬ ಹಣ್ಣು ತೊಟ್ಟು ಕಳಚಿ ಬೀಳುವಲ್ಲಿ,
ಕೂಡಲ ಸಂಗಮದೇವ ತನಗೆ ಬೇಕೆಂದು ಎತ್ತಿಕೊಂಡ.

ಶ್ರೀ ಬಸವೇಶ್ವರರು

## ಸಕಾರಣವಾಗಿ ಮತ್ತು ತರ್ಕದ ಅನುಕ್ರಮದಲ್ಲಿ ನಿರೂಪಿಸುವುದೇ ಧರ್ಮ

ಮಾನವ ಸ್ವಭಾವತಃ ವಿಚಾರವಾದಿ. ಚಿಂತನಶೀಲತೆ ಅವನ ಸಹಜಧರ್ಮ. ಆಕಾರಣದಿಂದಲೇ ಅವನು ತನ್ನ ಅನುಭವ ಮತ್ತು ಅನಿಸಿಕೆಗಳನ್ನು ವಿಚಾರದ ರಕ್ಷೆಯಲ್ಲಿ ನಿಯಂತ್ರಿಸಲು ಬಯಸುತ್ತಾನೆ. ಹಾಗೆ ಮಾಡಿದಾಗ ಅ ಸಿದ್ಧಾಂತಕ್ಕೆ ಒಂದು ಆಯಾಮ ದೊರೆತು ಅದು ಹೆಚ್ಚು ನೈಜ ಹಾಗೂ ಕ್ರಿಯಾಶೀಲ ಎನ್ನುವಂತಾಗಿದೆ. ನಮ್ಮ ಅನುಭವಗಳನ್ನು ವಿಚಾರದ ಸರಣಿಯಲ್ಲಿ ಪೋಣಿಸದಿದ್ದಾಗ ಅವು ಜಾಳು ಜಾಳಾಗಿದ್ದು. ತರ್ಕದ ಬಿಗಿ ಕೊಟ್ಟಿಲ್ಲವಾಗಿ, ಅವು ಮತಿವಂತರ ಮನ್ನಣೆಗೆ ಪಾತ್ರ-ವಾಗುವುದಿಲ್ಲ. ಆಕಾರಣದಿಂದಲೇ, ಮಾನವನ ಪ್ರಜ್ಞಾವಂತಿಕೆ ಸಾರ್ವತ್ರಿಕವಾಗಿ, ಇಂತಹ ವಿಚಾರ ನಿಯಂತ್ರಣಕ್ಕೆ ಒಳಪಟ್ಟು ಕೆಲಸ ಮಾಡಬೇಕಾಗುತ್ತದೆ.

ಹಾಗಾದರೆ, ವಿಚಾರ ಮತ್ತು ವೈಚಾರಿಕತೆ ಎಂದರೇನು ಮತ್ತು ಈ ವೈಚಾರಿಕತೆಗೆ ಇರಬಹುದಾದ ಇತಿಮಿತಿಗಳೇನು ಎಂಬುದನ್ನು ಕುರಿತು ಒಂದೆರಡು ಮಾತಿನಲ್ಲಿ ವಿವರಿಸುವುದು ಯುಕ್ತ. ಒಬ್ಬ ವ್ಯಕ್ತಿ ತನ್ನಲ್ಲಿ ಮೂಡಿದ ಅಭಿಪ್ರಾಯ ಅಥವಾ ಅನಿಸಿಕೆಗಳನ್ನು ಸ್ಪಷ್ಟ ಪಡಿಸಬೇಕಾದರೆ, ಅದಕ್ಕೆ ಬೇಕಾದ ತಾರ್ಕಿಕ ಅನುಕ್ರಮ (Logical Sequence) ಮತ್ತು ಆಧಾರಗಳೊಂದಿಗೆ ನಿರೂಪಿಸುವುದು ಅವನ ವೈಚಾರಿಕತೆಯ ಹೊಣೆಗಾರಿಕೆ. ಅವನ ಅಭಿಪ್ರಾಯವನ್ನು ಉಳಿದವರು ಏಕೆ ಮನ್ನಿಸಬೇಕು. ಎಂಬುದನ್ನೂ, ಅವರಲ್ಲಿ ಮನಗಾಣಿಸುವುದು, ವಿಚಾರವಂತನ ಕರ್ತವ್ಯ, ಬುದ್ಧಿವಂತನಾದ, ಇಂತಹ ಕರ್ತವ್ಯವನ್ನು ನಿರ್ವಹಿಸಲು ಬೇಕಾದ ಮಾನಸಿಕ ಶಿಕ್ಷಣವೇ ವೈಚಾರಿಕತೆ. ಒಂದೇ ಮಾತಿನಲ್ಲಿ ಹೇಳುವುದಾದರೆ ತಾನು

ಹೇಳಬೇಕಾದ ಮಾತನ್ನು ಸಕಾರಣವಾಗಿ ಮತ್ತೂ ತರ್ಕದ ಅನುಕ್ರಮದಲ್ಲಿ ನಿರೂಪಿ-
ಸುವುದೇ ವೈಚಾರಿಕತೆಯ ಮೂಲಧರ್ಮ. ವಿಜ್ಞಾನ, ದರ್ಶನ, ಧರ್ಮ ಈ
ಮೊದಲಾದ ಜ್ಞಾನದ ವಿವಿಧ ಶಾಲೆಗಳು, ವಿಚಾರದ, ಈ ಸಾಧಾರಣ ನಿಯಮಕ್ಕೆ
ಒಳಪಟ್ಟಂತೆ, ಮತ್ತೂ ಪ್ರಮಾಣ ಬದ್ಧತೆ ಒಂದೇ ಮಾದರಿಯಲ್ಲಿರುವುದಿಲ್ಲ. ಪ್ರತ್ಯಕ್ಷ
( Observation ) ವನ್ನು ನಂಬಿದ ವಿಜ್ಞಾನ ( Inferance ) ವನ್ನೂ ನಂಬಿದ
ದರ್ಶನ, ಪ್ರಭಾವ ಅಥವಾ ಅಂತ ಜ್ಞಾನ (Revelation) ವನ್ನೂ ನಂಬಿದ ಧರ್ಮ
ಇವುಗಳಲ್ಲಿ, ಕಾಣುವ ವೈಚಾರಿಕತೆಯ ಸ್ವರೂಪದಲ್ಲಿ, ಸಾಕಷ್ಟು ಗುಣ ಬೇಧವಿರಲು,
ಸಾಧ್ಯ, ಮತ್ತು ಅನಿವಾರ್ಯವೂ ಅಹುದು. ಧಾರ್ಮಿಕ ರಂಗದಲ್ಲಿ ಇರಬಹುದಾದ, ವೈ-
ಚಾರಿಕತೆಯನ್ನು ಕುರಿತು ಹೇಳಬೇಕಾದರೆ ಅದು, ಸಾಗರದ ನಡುವೆ, ಹಡಗಿನ
ಪ್ರಯಾಣಿಕನಾಗಿರಬಹುದಾದ, ಸ್ವಾತಂತ್ರ್ಯಕ್ಕೆ ಸಮ ಅಂದರೆ ಧಾರ್ಮಿಕ ರಂಗದಲ್ಲಿ
ಬೆಳಸಬಹುದಾದ ವೈಚಾರಿಕತೆ ಕೆಲವು ರೀತಿಯ ಇತಿಮಿತಿಗಳಿಗೆ ಒಳಪಟ್ಟಿರುತ್ತದೆ,
ಎನ್ನುವುದು ಈ ಮಾತಿನ ಅರ್ಥ. ಆ ರೀತಿಯ, ಇತಿಮಿತಿಗಳು ಏಕಿರಬೇಕು; ಎನ್ನುವು
ದಕ್ಕೂ ಕಾರಣಗಳಿವೆ. ಆದರೆ ಆ ವಿವರ ಇಲ್ಲಿ ಅಪ್ರಕೃತ, "

## ಕನ್ನಡ ನಾಡಿನ ಜಾಗೃತ ದೀಪ್ತಿ ಬಸವಣ್ಣ

ಇನ್ನು ಬಸವನನ್ನು ಕುರಿತು ಹೇಳುವುದಾದರೆ, ಕೇವಲ ಎಂಟನೂರ ವರ್ಷಗಳ
ಹಿಂದೆ, ಐತಿಹಾಸಿಕ ವ್ಯಕ್ತಿಯಾಗಿ ಬದುಕಿದ್ದ ಬಸವಣ್ಣ ಈಗ ನಮ್ಮ ಮುಂದೆ ಪುರಾಣದ
ವ್ಯಕ್ತಿಯಾಗಿ ಬಂದು ನಿಂತಿದ್ದಾನೆ. ಅವನ ಜೀವನಕ್ಕೆ ದೈವತ್ವದ ಲೇಪನವು
ದೊರೆತು, ಅವನು ದಂತ ಗೋಪುರದಲ್ಲಿ ಪ್ರತಿಷ್ಠಿತನಾಗಿದ್ದಾನೆ. ಅವನ ಜೀವನ
ಮತ್ತು ಸಾಧನೆಗಳನ್ನು ಚಿತ್ರಿಸುವಲ್ಲಿ, ಹರಿಹರ, ಷಡಕ್ಷರಿ, ಸೋಮನಾಥ, ಭೀಮಕವಿ,
ಸಿಂಗೀರಾಜ, ಈ ಮುಂತಾದ ಕವಿಗಳು ಮತ್ತು ಪುರಾಣಕಾರರು, ಬಸವನ ಬದುಕನ್ನು
ತುಂಬಾ ಉದಾತ್ತವಾಗಿ ಅವನನ್ನು ಒಬ್ಬ ಪವಾಡ ಪುರುಷನನ್ನಾಗಿ ಮಾಡಿದ್ದಾರೆ,
ಆದರೆ, ಇದರಲ್ಲಿ ಒಂದು ಸಮಾಧಾನದ ಅಂಶವೆಂದರೆ, ಬಸವ, ಮತ್ತು ಅವನ ಸಮ-
ಕಾಲೀನ ಶರಣರು, ತಾವೇ ಹಾಡಿದ ವಚನಗಳ ಸಂಗ್ರಹದ ಅಮೂಲ್ಯ ನಿಧಿ ನಮಗೆ
ಈಗ ದೊರೆತಿದೆ. ಶೂನ್ಯಸಂಪಾದನಕಾರರಿಂದ ಮೊದಲಾಗಿ ನಮ್ಮ ಸಮಕಾಲಿನ
ಯುಗದಲ್ಲಿದ್ದ ಮಾನ್ಯ ಶ್ರೀ ಹಳಕಟ್ಟಿ, ಪ್ರೊ|| ಬಸವನಾಳರಂತಹ, ಸಂಪಾದನ
ಕಾರರ ಶ್ರಮದ ಫಲವಾಗಿ ತಕ್ಕ ಮಟ್ಟಿಗೆ ಪರಿಷ್ಕರಗೊಂಡ, ವಚನ ಸಂಗ್ರಹ. ಸಂಪಾ
ದನಕಾರರ ಶ್ರಮದ ಫಲವಾಗಿ ತಕ್ಕ ಮಟ್ಟಿಗೆ ಪರಿಷ್ಕಾರಗೊಂಡ, ವಚನ ಸಂಗ್ರಹ,
ಈಗ ಲಭ್ಯವಿದ್ದು. ಅವುಗಳನ್ನಾಧರಿಸಿ, ಶರಣರ ದರ್ಶನ ಮತ್ತು ಅವರ ವೈಚಾರಿಕತೆ
ಯನ್ನು, ಸಮರ್ಥ ರೀತಿಯಲ್ಲಿ ಪುನ ರಚಿಸುವ ಕಾಲ ಈಗ ಸನ್ನಿಹಿತವಾಗಿದೆ.



ವೈದಿಕ ಮನೆತನದಲ್ಲಿ ಹುಟ್ಟಿದ ಬಸವಣ್ಣ ಅಲ್ಲಿ ತಾನೂ ತನ್ನವರಲ್ಲಿ ಕಂಡ ಉನ್ನತ
ಕುಲದವರೆಂಬ ಭ್ರಮೆ ಮತ್ತು ಅವರು ಆಚರಿಸುತ್ತಿದ್ದ ಉಪನಯನ ಯಜ್ಞಯಾಗಾದಿ
ಯಾಂತ್ರಿಕ ಕ್ರಿಯಾ ವಿಧಿಗಳಿಂದ ಬೇಸತ್ತು. ಇದಕ್ಕಿಂತಲೂ ಅರ್ಥ ಪೂರ್ಣವಾದ,
ಧಾರ್ಮಿಕ ಜೀವನದ ಸಾಧ್ಯವೇ ಎಂಬುವುದನ್ನು ಹುಡುಕಲು ಹೊರಡುತ್ತಾನೆ.
ಸಾಮಾನ್ಯವಾಗಿ, ಸಾಧಾರಣ ಮಟ್ಟದ ಕಿರಿಯ ಬಾಲಕರ ಮನಸ್ಸು, ತಮ್ಮ ಸುತ್ತಣ
ಪರಿಸರದ ಪ್ರಭಾವಕ್ಕನುಗುಣವಾಗಿ, ಅದರ ಪಡಿಯಚ್ಚಿನಂತೆ, ರೂಪುಗೊಳ್ಳುವುದು,
ಒಂದು ನಿಸರ್ಗ ನಿಯಮ, ಇಂದಿನ ಮನಶಾಸ್ತ್ರಜ್ಞನರೂ ಸಹ, ಇದೇ ಮಾತನ್ನು
ಬೆಂಬಲಿಸುತ್ತಾರೆ. ಆದರೆ ಈ ನಿಯಮಕ್ಕೆ ಅಪವಾದರೂಪದಲ್ಲಿ, ಬಸವಣ್ಣನು ತನ್ನ
ಲ್ಲಿ ಉಂಟಾದ ವೈಚಾರಿಕತೆಯ ಜಾಗೃತಿಯಿಂದಾಗಿ, ತನ್ನ ಹುಟ್ಟು ವೈದಿಕ ಧರ್ಮದ
ಶೃಂಕಲೆಯಿಂದ, ಸಿಡಿದು ಬಂದಿದ್ದು ಅವನ ಅದಮ್ಯವಾದ, ಧೀಶಕ್ತಿಯ ದಿವ್ಯ ನಿದರ್ಶ
ನದ ಸನಾತನತೆ ಮತ್ತು ವಿನೂತನತೆ, ಅನುಕರಣೆ ಮತ್ತು ಅನ್ವೇಷಣೆ, ಸಂಪ್ರದಾ-
ಯಬದ್ಧತೆ ಮತ್ತು ವೈಚಾರಿಕತೆ, ಈ ದ್ವಂದ್ವಗಳ ನಡುವೆ, ಅಂದು, ಆ ಕಿಶೋರನ
ಮನಸ್ಸಿನಲ್ಲಿ ಮೂಡಿದ ಸಂಘರ್ಷ ಅವನ ಮುಂದಿನ ಕ್ರಾಂತಿಕಾರಿ ಬದುಕಿಗೆ ನಾಂದಿ
ಯಾಗುತ್ತದೆ, ಆ ಸಂಘರ್ಷದ ಫಲವಾಗಿ, ಧಾರ್ಮಿಕ ದಿಗಂತದಲ್ಲಿ, ಶಿವಾನುಭವದ
ನವೋದಯವಾಗುತ್ತದೆ, ಧಾರ್ಮಿಕ ಜಾಗೃತಿಯ ದೀಪ್ತಿ ಕನ್ನಡನಾಡಿನಲ್ಲಿ ಮೂಡಿ,
ಸುತ್ತೆಲ್ಲಾ ಹರಡಲು ಶಕ್ತವಾಗುತ್ತದೆ.

— ಬಸವಪಥದ ಕೃಪೆಯಿಂದ

---

## ಆಜೀವ ಸದಸ್ಯರುಗಳಲ್ಲಿ ಒಂದು ಮನವಿ.

ಸಿದ್ಧಗಂಗಾ ಪತ್ರಿಕೆಯ ಅನೇಕ ಅಜೀವ ಸದಸ್ಯರುಗಳ ವಿಳಾಸಗಳು
ಬದಲಾಗಿರುವುದರಿಂದ ಕಾರ್ಯಲಯದಿಂದ ಕಳುಹಿಸಿದ ಪತ್ರಿಕೆಗಳು
ಅವರುಗಳಿಗೆ ತಲುಪದೆ ಹಿಂತಿರುಗುತ್ತಿವೆ. ದಯವಿಟ್ಟು ನಿಮ್ಮ
ಬದಲಾದ ವಿಳಾಸಗಳನ್ನು ಆಗಿಂದಾಗ್ಗೆ ಪತ್ರಿಕಾ ಕಾರ್ಯಾಲಯಕ್ಕೆ
ಕಳುಹಿಸಿ ಕೊಡುವುದರ ಮುಖೇನ **"ಸಿದ್ಧಗಂಗಾ"** ನಿಮಗೆ
ಸುಗಮವಾಗಿ ತಲುಪಲು ನಮ್ಮೊಂದಿಗೆ ಸಹಕರಿಸಲು ಪ್ರಾರ್ಥನೆ.
ತಮ್ಮ ಸದಸ್ಯತ್ವದ ನಂಬರನ್ನು ತಪ್ಪದೇ ತಿಳಿಸಿರಿ.

ಪ್ರಕಾಶಕರು.

## ಸ ಹ ವಾ ಸ

ಗೊ. ರು. ಚನ್ನಬಸಪ್ಪ, ೧೪೫೩, ಗ್ರಾಮ ಜ್ಯೋತಿ, ಸೌತ್‌ಎಂಡ್ 'ಎ' ರಸ್ತೆ, ೯ನೇ ಬ್ಲಾಕ್,
ಜಯನಗರ, ಬೆಂಗಳೂರು-೫೬೦೦೬೯.

ಸಹವಾಸವಿಲ್ಲದ ಒಂದು ಜೀವಿಯೂ ಈ ಸೃಷ್ಟಿಯಲ್ಲಿಲ್ಲ. ಸಹವಾಸ ತಪ್ಪಿದರೆ ಇಲ್ಲಿ ಏನೂ ಇಲ್ಲ. ಪ್ರಕೃತಿಗೆ ಸ್ಪಂದಿಸುವ ಜೀವಿ ಪ್ರಾಣಿಯಿರಲಿ, ಸಸ್ಯವಿರಲಿ, ಮಾನವನಿರಲಿ ಸಹವಾಸ ಅನಿವಾರ್ಯ. ಸೃಷ್ಟಿಯ ಬೆಡಗಿರುವುದೇ ಈ ಸಹವಾಸದಲ್ಲಿ.

ಸಂವೇದನಶೀಲ ಮಾನವನಂತೂ ಸಹವಾಸವಿಲ್ಲದೆ ಇರಲಾರ. ಅವನ ಬದುಕಿಗೆ ನೀರು ಗಾಳಿಯ ಸಹವಾಸ ಬೇಕೆಬೇಕು. ಬಯಲಂತೂ ಅವನ ಎಡಬಿಡದ ಸಹವಾಸ ಭೂಮಿ ಅವನು ನಿಲ್ಲುವ ನೆಲೆ. ಇನ್ನು ಬೆಂಕಿ ಅಪಾಯಕರವಾದರೂ ಅದನ್ನು ಬಿಟ್ಟಿರುವಂತಿಲ್ಲ ಹೀಗೆ ಪಂಚಭೂತಗಳ ಸಹವಾಸದಲ್ಲೇ ಮಾನವನ ಬದುಕು; ಬಾಳು.

ಮಾನವನ ಅನುಭವಕ್ಕೆ ಬಂದಿರುವಂತೆ ಪ್ರಶಾಂತ ಪ್ರಕೃತಿಯ ಸಹವಾಸ ಹಿತಕರ, ಅಗತ್ಯ ಮತ್ತು ಸುರಕ್ಷಿತ. ಅದೇ ಪ್ರಯುಕ್ತ ಪ್ರಕೃತಿಯ ಸಹವಾಸ ಅಪಾಯಕರ, ಅನಗತ್ಯ ಮತ್ತು ಅರಕ್ಷಿತ. ಹಾಗೆಯೇ ಮಾನವ-ಮಾನವ ಸಹವಾಸವೂ ಕೂಡ. ಸತ್ಯ ಸಹವಾಸವಾದರೆ ಅದು ಪ್ರಶಾಂತ ಪ್ರಕೃತಿ. ದುಸ್ಸಹವಾದರೆ ಪ್ರಮತ್ತ ಪ್ರಕೃತಿ.

ಪರಿಣಾಮ ಮತ್ತು ಪ್ರಭಾವ ಸಹವಾಸದ ಸಹಜ ಗುಣ. ಸುಣ್ಣ ಮುಟ್ಟಿದರೆ ಸುಣ್ಣ. ಬಣ್ಣ ಮುಟ್ಟಿದರೆ ಬಣ್ಣ. ವಿಚಿತ್ರವೆಂದರೆ ಕೈಗೆ ಕೆಸರು ಅಂಟುಕೊಂಡಷ್ಟು ಸುಲಭವಾಗಿ ಮೊಸರು ಅಂಟಿಕೊಳ್ಳದಿರಬಹುದು. ದುಸ್ಸಂಗ-ಸತ್ಸಂಗಗಳೂ ಹಾಗೆಯೇ ಮನುಷ್ಯ ದುಸ್ಸಂಗದಿಂದ ಬೇಗ ಪ್ರಭಾವಿತನಾಗುತಾನ್ತೆ. ಒಮ್ಮೆ ಅದರಲ್ಲಿ ಅವನು ಸಿಕ್ಕಿಕೊಂಡನೆಂದರೆ ಅವರಿಂದ ಹೊರಬರಲಾರದಷ್ಟು ದುರ್ಬಲನಾಗಿ ಬಿಡುತ್ತಾನೆ.

ಒಂದು ಸ್ವಾರಸ್ಯದ ಪ್ರಕರಣ ಹೀಗಿದೆ ಕುಡಿತದ ಚಟಕ್ಕೆ ಬಲಿಯಾಗಿದ್ದ ಮಗನಿಗೆ ಆತನ ತಂದೆ, "ಕುಡಿತ ಒಳ್ಳೆಯದಲ್ಲ" ಎಂದು ಬುದ್ಧಿವಾದ ಹೇಳುತ್ತಾನೆ ಮಗನೂ ಬುದ್ಧಿವಂತನೆ. "ಅಪ್ಪಾ ನೀನೊಮ್ಮೆ ಕುಡಿದು ನೋಡು, ನಂತರ ನನಗೆ ಹೇಳು. ಬೇಡವೆಂದರೆ ಬಿಟ್ಟು ಬಿಡುತ್ತೇನೆ" ಎಂದು ತಂದೆಗೆ ಹೇಳಿದ. ಹಾಗಾದರೂ ಮಗ ಕುಡಿಯುವುದನ್ನು ಬಿಟ್ಟಾನು ಎಂಬ ಆಸೆಯಿಂದ ತಂದೆ ತಾನೂ ಒಮ್ಮೆ ಕುಡಿದ ಕುಡಿತದ ಅಮಲು ಪ್ರಾಮಾಣಿಕವಾಗಿ ತನ್ನ ಕೆಲಸ ಮಾಡಿತು. ಮಗನೇ ಬಂದು ತಂದೆಯನ್ನು ಕೇಳಿದ. "ಅಪ್ಪಾ ಕುಡಿಯುವುದನ್ನು ಬಿಡಲೇ"? ಎಂದು. ಇದನ್ನೇ ನಾವು ಸಹವಾಸ ದೋಷ ಎನ್ನುವುದು.



ಮಟ್ಟದಿಂದಲೇ ಮಕ್ಕಳಲ್ಲಿ ಒಳಿತು ಕೆಡಕುಗಳನ್ನು ಅರಿಯುವ ಮತ್ತು ಸರಿಯಾದ ಮಾರ್ಗದಲ್ಲಿ ನಡೆಯುವ ಮನೋಧಾರ್ಡ್ಯತೆಯನ್ನು, ಆತ್ಮವಿಶ್ವಾಸವನ್ನು ಬೆಳೆಸುವ ರೀತಿಯಲ್ಲಿ ಶಿಕ್ಷಣ ರೂಪಾಂತರಗೊಳ್ಳಬೇಕು.

ವಿದ್ಯಾರ್ಥಿಯ ಬೌದ್ಧಿಕ ಜ್ಞಾನ ಅಪರಿಮಿತ ವಾಗಿದ್ದು, ಆತನ ವ್ಯಯಕ್ತಿಕ ಜೀವನ ಅನೀತಿಯುತವಾಗಿದ್ದಲ್ಲಿ ಅಂತಹ ವ್ಯಕ್ತಿಯಿಂದ ಸಮಾಜಕಲ್ಯಾಣ ಹೇಗೆ-ಸಾಧ್ಯ ? ವಿದ್ಯಾರ್ಥಿಯ ವೈಯಕ್ತಿಕ ಜೀವನ, ನಡೆನುಡಿಗಳು ಆತನ ಶೈಕ್ಷಣಿಕ ಅರ್ಹತೆಯನ್ನು ನಿರ್ಧರಿಸುವಾಗ, ಪರಿಗಣನೆಗೆ ತಗೆದು ಕೊಳ್ಳುವಂತಿರಬೇಕು. ವಿದ್ಯಾರ್ಥಿಯ ಬೌದ್ಧಿಕ ಸಾಮರ್ಥ್ಯದ ಜೊತೆಗೆ ಆತನ ಶೀಲ ಸಂಪನ್ನತೆಯು ಸಹಾ ಆತನ ಶೈಕ್ಷಣಿಕ ಸಾಧನೆಯನ್ನು ಅಳೆಯುವಲ್ಲಿ ಮಾನದಂಡವಾಗಬೇಕು. ಆಗ ಮಾತ್ರ ಶಿಕ್ಷಣ ಅರ್ಥಪೂರ್ಣವಾಗುತ್ತದೆ.

---

## ಆ ಶೆ

ಅವಿವೇಕ ದಿಂದ ಆಶೆಗಳು ಉದ್ಭವಿಸುತ್ತವೆ. ವಿವೇಕವು ಉದಯವಾದರೆ, ಆಶೆಗಳು ನಾಶವಾಗುತ್ತವೆ. ನಿತ್ಯಾನಿತ್ಯ ವಸ್ತುಗಳನ್ನು ಅರಿಯುವ ವಿವೇಕವನ್ನು ಕಲಿಯಿರಿ, ಆತ್ಮಜ್ಞಾನ ಒಂದೇ, ಮಾನವನನ್ನು ಜನನ-ಮರಣ ಪ್ರವಾಹದಿಂದ ತಪ್ಪಿಸ ತಕ್ಕದ್ದು, ಆತ್ಮನನ್ನು ಧ್ಯಾನ್ಯಮಾಡಿ ಜೀವನ್ಮುಕ್ತರಾಗಿರಿ. "ವಾಸನೆ" ಗಳ ನಾಶವೇ-ಮೋಕ್ಷ. ಸತ್ಯವನ್ನು ನುಡಿಯಿರಿ. ಮಹಾತ್ಮರ ಜೀವನ ಚರಿತ್ರೆಗಳ ಸತತ ಅಧ್ಯಯನದಿಂದ ನೀವೂ ಸಹ ಸಂತರಂತೆ ಜೀವನವನ್ನು ನಡೆಸುವಂತಾಗುತ್ತದೆ. ಅವರ ಶ್ರೇಷ್ಠ ಗುಣಗಳು ನಿಮ್ಮಲ್ಲಿ ಮೂಡುತ್ತವೆ. ಎಲ್ಲಾ ಜೀವಜಂತು-ಗಳಲ್ಲಿಯೂ ಒಬ್ಬ ಅಮೃತಾತ್ಮನು ಇರುತ್ತಾನೆ. ಉಪನಿಷತ್ತುಗಳು ಜೀವ-ಬ್ರಹ್ಮರ ಐಕ್ಯದ ತತ್ವನ್ನು ಭೋಧಿಸುತ್ತವೆ. ನಿತ್ಯವೂ ಭಗವಂತನನ್ನು ಸ್ತೋತ್ರ ಮಾಡುತ್ತಾ ಅವನ ಕೃಪೆಯನ್ನು ಸಂಪಾದಿಸಿಕೊಳ್ಳಿ, ಆತನಲ್ಲಿ ನೆಲೆಸಿರಿ. ಪ್ರತಿಯೊಬ್ಬರಲ್ಲಿಯೂ, ಪ್ರತಿ ವಸ್ತುವಿನಲ್ಲಿಯೂ ಭಗವಂತನನ್ನು ಕಾಣಿರಿ, ಅವಿದ್ಯೆಯಿಂದ ನಿಮ್ಮ ನಿಜವಾದ ಸಚ್ಚಿದಾನಂದ ಸ್ವರೂಪವನ್ನು ಮರೆತಿರುವಿರಿ. ಪಿಪಿಲಿಕಾದಿ ಬ್ರಹ್ಮಪರ್ಯಂತ ಎಲ್ಲರಲ್ಲಿರ ತಕ್ಕವನೂ ಒಬ್ಬ ಪರಮಾತ್ಮನೇ.

ಸಂಗ್ರಹ ;- ಎಂ. ರೇಣುಕಾರಾಧ್ಯ.

---

# ನೈತಿಕ ಶಿಕ್ಷಣ

ಶ್ರೀ ಸೋಮಶೇಖರ್. ಎಂ.ಕಾಂ., ಉಪ ವಿಭಾಗಾಧಿಕಾರಿಗಳು. ಧಾರವಾಡ.

ವ್ಯಕ್ತಿಯಲ್ಲಿ ಸುಪ್ತವಾಗಿ ಹುದುಗಿರುವ ವಿಶಿಷ್ಟ ಶಕ್ತಿಯನ್ನು ಆವಿಷ್ಕಾರಗೊಳಿಸಿ ವ್ಯಕ್ತಿಯಿನ್ನು ಸುಸಂಸ್ಕೃತ ನಾಗರೀಕನನ್ನಾಗಿ ಪರಿವರ್ತಿಸುವ ಒಂದು ಪ್ರಭಾವೀ ಸಾಧನವೇ ಶಿಕ್ಷಣ. ನಾಲ್ಕು ಗೋಡೆಗಳ ಮಧ್ಯೆ ಸೀಮಿತಗೊಳ್ಳುವ ಪಠ್ಯ ಪುಸ್ತಕಗಳ ಪಠಣವೇ ಶಿಕ್ಷಣವಲ್ಲ. ವಿಶಾಲವಾದ ಅರ್ಥದಲ್ಲಿ ಶಿಕ್ಷಣ ವ್ಯಕ್ತಿಯನ್ನು ಪರಿಪೂರ್ಣತೆಯ ಕಡೆಗೆ ಕೊಂಡೊಯ್ಯುವ ಒಂದು ದಿವ್ಯ ಸಾಧನ. ಪ್ರಾಣಿಗಳ ಅಸ್ತಿತ್ವಕ್ಕಿಂತ ಮನುಷ್ಯನ ಅಸ್ತಿತ್ವ ಭಿನ್ನವಾಗಿರಲು ಮುಖ್ಯ ಕಾರಣ ಮನುಷ್ಯ ಬುದ್ಧಿಜೀವಿ. ಒಳಿತು - ಕೆಡಕುಗಳನ್ನು ಸರಿ - ತಪ್ಪುಗಳನ್ನು ನಿರ್ಧರಿಸುವ ಶಕ್ತಿಯುಳ್ಳ ಮಾನವನಿಗೆ ಉತ್ತಮವಾದ ಮಾರ್ಗದಲ್ಲಿ ಸಾಗುವಂತೆ ಪ್ರೇರೇಪಿಸುವ ದಾರಿದೀವಿಗೆಯೆ ಶಿಕ್ಷಣ, ವ್ಯಕ್ತಿಯಲ್ಲಿನ ಬುದ್ಧಿ ಸಾಮರ್ಥ್ಯಗಳು ಆತನ ವೈಯಕ್ತಿಕ ವ್ಯಕ್ತಿತ್ವದ ವಿಕಾಸಕ್ಕೆ ನೆರವಾಗಲು ಮತ್ತು ಆ ಮೂಲಕ ಸರ್ವಾಂಗೀಣ ವಿಕಾಸಕ್ಕೆ ಸಾಧನವಾಗಲು ಸಹಾಯಕವಾಗುವ ಸಾಮಾಜಿಕ ವ್ಯವಸ್ಥೆಯ ಒಂದು ಅವಿಭಾಜ್ಯ ಅಂಗವೇ ಶಿಕ್ಷಣ.

ಇಂದು ನಮಗೆ ದೊರಕುತ್ತಿರುವ ಶಿಕ್ಷಣ ನಿಜವಾದ ಶಿಕ್ಷಣದ ವ್ಯಾಖಾನದಲ್ಲಿ ಮೂಡಿ ಬರುವ ಗುಣಲಕ್ಷಣಗಳನ್ನು ಹೊಂದಿಲ್ಲದೆ ಇರುವುದು ಒಂದು ವಿಪರ್ಯಾಸವೇಸರಿ.

ಓಂ ಅಸತೋಮಾ ಸದ್ಗಮಯ
ತಮಸೋಮಾ ಜ್ಯೋತಿರ್ಗಮಯ
ಮೃತ್ಯೋರ್ಮಾ ಅಮೃತಂಗಮಯ
ಓಂ ಶಾಂತಿಃ ಶಾಂತಿಃ ಶಾಂತಿಃ

ಎಂಬಂತೆ ಅಸತ್ಯದಿಂದ ಸತ್ಯವನ್ನು, ಕತ್ತಲಿನಿಂದ ಬೆಳಕನ್ನು ಮೃತ್ಯುವಿನಿಂದ ಅಮರತ್ವವನ್ನು ಹೊಂದಲು ಸಾಧನವಾಗಬೇಕಾಗಿದ್ದ ಶಿಕ್ಷಣ, ಇಂದು ವ್ಯಕ್ತಿಯ ಶೀಲ, ಚಾರಿತ್ರ್ಯಗಳನ್ನು ರೂಪಿಸಿ ವ್ಯಕ್ತಿಯನ್ನು ಸುಸಂಸ್ಕೃತನನ್ನಾಗಿ ಮಾಡುವ ದಿಸೆಯಲ್ಲಿ ಸಫಲವಾಗಿವೆಯೇ? ಎನ್ನುವುದು ಎಲ್ಲ ಶಿಕ್ಷಣ ತಜ್ಞರನ್ನು ಸಮಾಜದ ಹಿತಚಿಂತಕರನ್ನು ಕಾಡುತ್ತಿರುವ ಒಂದು ಬೃಹತ್ ಪ್ರಶ್ನೆ.



ಮಹಾತ್ಮ ಗಾಂಧೀಜಿಯವರ ದೃಷ್ಟಿಯಲ್ಲಿ ಶೀಲರಹಿತ ಶಿಕ್ಷಣ ಸಪ್ತ ಮಹಾ
ಪಾತಕಗಳಲ್ಲಿ ಒಂದು. ಯಾವ ಶಿಕ್ಷಣ ವ್ಯಕ್ತಿಯನ್ನು ಶೀಲವಂತನನ್ನಾಗಿಯೂ
ಸಮಾಜದ ಬಗ್ಗೆ ಕಳಕಳಿ ಉಳ್ಳ ವ್ಯಕ್ತಿಯನ್ನಾಗಿಯೂ ರೂಪಿಸುವುದಿಲ್ಲವೋ ಆ
ಶಿಕ್ಷಣವು ಸಮಾಜಕ್ಕೆ ಒಂದು ಮಾರಕ ಅಸ್ತ್ರವಿದ್ದಂತೆ. ವ್ಯಕ್ತಿಯಲ್ಲಿ ಸುಪ್ತವಾಗಿ
ಅಡಗಿರುವ ಪರಿಪೂರ್ಣತೆಯ ಆವಿಷ್ಕಾರವೇ ಶಿಕ್ಷಣ. ಸ್ವಾಮಿ ವಿವೇಕಾನಂದರ ದೃಷ್ಟಿ
ಯಲ್ಲಿ ಚಾರಿತ್ರ್ಯ ನಿರ್ಮಾಣ ಶಿಕ್ಷಣದ ಮುಖ್ಯ ಗುರಿಗಳಲ್ಲಿ ಒಂದು. ನಮಗೆ ಎಂತಹ
ಶಿಕ್ಷಣ ಬೇಕು ಎನ್ನುವ ಪ್ರಶ್ನೆಗೆ ಸ್ವಾಮಿ ವಿವೇಕಾನಂದರು ಈ ರೀತಿ ಉತ್ತರಿಸುತ್ತಾರೆ.
“ಯಾವ ಶಿಕ್ಷಣದಿಂದ ವ್ಯಕ್ತಿಯಲ್ಲಿ ಚಾರಿತ್ರ್ಯ ಶಕ್ತಿ ರೂಪುಗೊಳ್ಳುವುದೋ ಬೌದ್ಧಿಕ
ಸಾಮರ್ಥ್ಯದ ಸಂವರ್ಧನೆಯಾಗುವುದೋ, ವ್ಯಕ್ತಿ ತನ್ನ ಕಾಲಮೇಲೆ ತಾನು ನಿಲ್ಲಬಲ್ಲ
ಸ್ವಾವಲಂಬಿಯನ್ನಾಗಿ ಸಮರ್ಥಶೀಲನನ್ನಾಗಿ ಮಾಡುವುದೋ ಅಂತಹ ಶಿಕ್ಷಣ-
ನಮಗೆ ಬೇಕು.

ಇತ್ತೀಚಿನ ದಿನಗಳಲ್ಲಿ ಶಾಲಾ ಕಾಲೇಜುಗಳಲ್ಲಿನ ವಿದ್ಯಾರ್ಥಿಗಳ ಅಶಿಸ್ತು, ಅವಿ-
ಧೇಯತೆಯನ್ನು ಕಂಡಾಗ ಸಮಾಜದ ಭವಿಷ್ಯದ ಬಗ್ಗೆ ಭೀತಿಯುಂಟಾಗುತ್ತದೆ.
ಸರಸ್ವತಿಯ ದೇಗುಲವಾಗಬೇಕಿದ್ದ ಶಿಕ್ಷಣ ಕೇಂದ್ರ ಪೈಶಾಚಿಕ ಕೃತ್ಯಗಳ ಆಗರ-
ವಾಗಿರುವುದನ್ನು ಕಂಡು ದುಃಖವಾಗುತ್ತದೆ. ವಿದ್ಯಾರ್ಥಿಗಳ ಉಪಾಧ್ಯಾಯರುಗಳ
ನಡುವಣ ಸುಮಧುರ ಸೌಹಾರ್ದಯುತ ಸಂಬಂಧದ ಕೊರತೆಯಿಂದ ಶಾಲಾ
ಕಾಲೇಜುಗಳು ಜ್ಞಾನದೇಗುಲಗಳಾಗುವ ಬದಲು ಗಲಭೆಗಳ ಕೇಂದ್ರಗಳಾಗಿವೆ.

ಭಾವಿ ಭಾರತದ ಭವ್ಯ ಇತಿಹಾಸವು ರೂಪಗೊಳ್ಳುವುದಾದರೆ ಅದು ಮಾದರಿಯ
ಪಾಠಶಾಲೆಗಳಲ್ಲಿಯೇ. ಏಕೆಂದರೆ ಇಂದಿನ ಮಕ್ಕಳೇ ಮುಂದಿನ ಪ್ರಜೆಗಳು.
ಮಕ್ಕಳಲ್ಲಿನ ಪ್ರತಿಭೆ ನೈತಿಕವಾಗಿ ಅರಳಿ ವಿಕಸಿಸಿದಾಗ ಅವರ ಸೌರಭವು ಇದೇ
ನಾಡಿನ ಇತಿಹಾಸವನ್ನು ಬೆಳಗಿಸುತ್ತವೆ.

ಶಿಕ್ಷಣ ವ್ಯವಸ್ಥೆಯಲ್ಲಿ ಸಮಗ್ರವಾದ ಸುಧಾರಣೆ ಆಗದೆ ಶಿಕ್ಷಣ ವ್ಯವಸ್ಥೆಯಲ್ಲಿ
ರುವ ಲೋಪದೋಷಗಳು ನಿವಾರಣೆಯಾಗುವಂತಿಲ್ಲ. ಶಿಕ್ಷಣ ಪಠ್ಯಕ್ರಮದಲ್ಲಿ ನೈತಿಕ
ಶಿಕ್ಷಣವನ್ನು ಒಂದು ಪಠ್ಯ ವಿಷಯವನ್ನಾಗಿ ಸೇರಿಸಿ ಆ ಬಗ್ಗೆ ಕಟ್ಟು ನಿಟ್ಟಾದ
ಬೋಧನಾ ಕ್ರಮವನ್ನು ರೂಪಿಸಬೇಕಾದುದು ಶಿಕ್ಷಣ ವ್ಯವಸ್ಥೆಯಲ್ಲಿ ನಾವು
ತರಬೇಕಾದ ಪ್ರಮುಖ ಸುಧಾರಣೆಯೂ ಒಂದು. ವಿಶ್ವದ ವಿವಿಧ ಧರ್ಮಗಳ ತತ್ವ,
ಸಿದ್ಧಾಂತಗಳನ್ನು ಮತ್ತು ವಿಶ್ವದ ಮಹಾ ವಿಭೂತಿ ಪುರುಷರ ಜೀವನ ಸಾಧನೆಗಳನ್ನು
ಒಳಗೊಂಡಂತೆ ನೈತಿಕ ಶಿಕ್ಷಣದ ಪಠ್ಯಕ್ರಮ ರೂಪಗೊಳ್ಳಬೇಕು. ಪ್ರಾಥಮಿಕ ಶಾಲೆಯ

ಸಹವಾಸಗಳು ಹಲವಾರು, ವಸ್ತು ಅಥವಾ ವಿಚಾರದ ಸಹವಾಸವಿರ ಬಹುದು. ಇನ್ನೊಂದು ಜೀವಿಯ ಸಹವಾಸವಿರಬಹುದು. ನಮಗೆ ತಿಳಿದೋ ತಿಳಿಯದೆಯೋ ಒಂದೊಂದು ಸಹವಾಸಕ್ಕೆ ನಾವು ಸಿಲುಕುತ್ತೇವೆ. ಸಹವಾಸಗಳು ಎಷ್ಟು ಬಗೆಯೋ ಅವುಗಳ ಸ್ವರೂಪ, ಸಂಬಂಧ, ಸಫಲತೆಗಳಲ್ಲೂ ಅಷ್ಟು ಬಗೆ. ರಾಜಕಾರಣಿಯ ಸಹವಾಸಕ್ಕಿಂತ ಬುದ್ಧಿಜೀವಿಯ ಸಹವಾಸ ಭಿನ್ನವಾದುದು. ಸಂಸಾರಿಯ ಸಹವಾಸದ ಸುಖವನ್ನು ಸನ್ಯಾಸಿಯ ಸಹವಾಸದಲ್ಲಿ ನಿರೀಕ್ಷಿಸುವುದು ಕಷ್ಟ. ಶ್ರೀಮಂತರ ಸಹವಾಸ ಒಂದು ಬಗೆಯಾದರೆ ಶ್ರಮಜೀವಿಯ ಸಹವಾಸ ಒಂದು ಬಗೆ. ಕಳ್ಳರು, ಕುಡುಕರ ಸಹವಾಸವೇ ಬೇರೆ; ಸಾಹಸಿ, ಸಭ್ಯರ ಸಹವಾಸವೇ ಬೇರೆ. ಹೆಣ್ಣು-ಹೊನ್ನುಗಳ ಸಹವಾಸಕ್ಕಂತೂ ಸಾವಿರಾರು ಕಥೆಗಳಿವೆ. ಹೀಗೆಯೇ ದಡ್ಡರ ಸಹವಾಸ, ದಳ್ಳಾಳಿಗಳ ಸಹವಾಸ, ವಕೀಲ, ವೈದ್ಯರ ಸಹವಾಸ, ತಾಂತ್ರಿಕರ ಸಹವಾಸ, ಹುಡುಗ ಮುದುಕರ ಸಹವಾಸ, ಬೀಡಿ ಸಿಗರೇಟು ಸಹವಾಸ ನಾಟಕ ಸಿನಿಮ ಸಹವಾಸ ಹೀಗೆ ಲೆಕ್ಕವಿಲ್ಲದಷ್ಟು ಸಹವಾಸಗಳಿವೆ. ಇವುಗಳಲ್ಲಿ ಕೆಲವು ಬೇಕು; ಕೆಲವು ಬೇಡಗಳೇನೊ ಇದ್ದರೂ, ಯಾವುದರ ಅಥವಾ ಯಾರ ಸಹವಾಸದಿಂದ ಒಳ್ಳೆಯ ಪರಿಣಾಮವಾಗುವುದೋ ಅದು ಸತ್ಯಸಹವಾಸವೆನಿಸಿಕೊಳ್ಳುತ್ತದೆ.

ಸಾರ ಸಜ್ಜನರ ಸಂಗವದು ಲೇಸಯ್ಯ ಎಂದಿದ್ದಾರೆ ಶರಣರು. ಸಜ್ಜನರ ಸಹವಾಸದಿಂದ ನಮ್ಮಲ್ಲಿ ಸದ್ಗುಣ, ಸಚ್ಚಾರಿತ್ರ್ಯ ಸನ್ನಡತೆಗಳು ಅಳವಡುತ್ತವೆ ಅದೇ ದುಷ್ಟ ಶಕ್ತಿಗಳೊಡನೆ ಸಂಪರ್ಕವಿಟ್ಟು ಕೊಂಡರೆ ಅದು ನಮ್ಮನ್ನು ದುರ್ನಡತೆ ಮತ್ತು ನರಳಾಟಗಳ ಏಣಿ ಹತ್ತಿಸುತ್ತದೆ. ಆದ್ದರಿಂದ ಆಯ್ಕೆ ಅತ್ಯಂತ ಮುಖ್ಯವಾದುದು.

ಸತ್ಯಸಹವಾಸವು ನಾವು ಸಹಜವಾಗಿ ಮತ್ತು ಸಕ್ರಮವಾಗಿ ಬದುಕಲು ಮತ್ತು ನಿತ್ಯದ ಸಮಸ್ಯೆಗಳನ್ನು ಯುಕ್ತಾ ಯುಕ್ತವಾಗಿ ಬಗೆಹರಿಸಿಕೊಳ್ಳಲು ಅಗತ್ಯ ತರಬೇತಿ ನೀಡುತ್ತದೆ. ಸತ್ಸಂಗದಿಂದ ಸಣ್ಣತನ, ಪೂರ್ವಾಗ್ರಹ ಮತ್ತು ಪಕ್ಷಪಾತ ದೃಷ್ಟಿಗಳೆಲ್ಲ ನಮ್ಮಿಂದ ದೂರವಾಗುತ್ತದೆ. ಸತ್ಸಂಗಕ್ಕೆ ನಾವು ಅಂಟಿಕೊಳ್ಳದಿದ್ದರೆ ಉತ್ಥಾನಕ್ಕೆ ನಾವು ಪಡುವ ಪ್ರಾಮಾಣಿಕ ಹಂಬಲವು ವ್ಯರ್ಥವಾಗುತ್ತದೆ. ಒಳಿತು ಕೆಡುಕುಗಳ ವ್ಯತ್ಯಾಸವೇ ನಮಗೆ ತಿಳಿಯುವುದಿಲ್ಲ. ವಾಸ್ತವವಾಗಿ ಹೇಳುವುದಾದರೆ ನಮ್ಮ ವಕ್ರ ಐಹಿಕ ಪ್ರಲೋಭನೆಗಳನ್ನು ಪರಿವರ್ತಿಸಿ ನಮ್ಮನ್ನು ಸಜ್ಜನಿಕೆ, ಸಭ್ಯತೆ ಮತ್ತು ಸಹಜತೆಗಳ ಕಡೆ ತಿರುಗಿಸುವ ಶಿಕ್ಷಣ ದೊರೆಯುವುದು ಸತ್ಸಂಗದಿಂದ ಮಾತ್ರ. ಒಳ್ಳೆಯ ಸಹವಾಸದಿಂದ ವ್ಯಕ್ತಿಯ ಸ್ಥಾನಮಾನಗಳು ಉನ್ನತಗೊಳ್ಳುತ್ತವೆ. ಬಹುಮಟ್ಟಿಗೆ ನಮ್ಮ ವ್ಯಕ್ತಿತ್ವಕ್ಕೆ ನಮ್ಮ ಸಹವಾಸವೇ ಅಳತೆಗೋಲಾಗುತ್ತದೆ.

ಸತ್ಸಹವಾಸದಿಂದ ಸತ್ಪರಿಣಾಮ. ಆದರಿಂದ ವ್ಯಕ್ತಿಯ ಅಂತರಂಗ ಬಹಿರಂಗಗಳೆರಡಕ್ಕೂ ಸಂಸ್ಕಾರ ದೊರೆಯುತ್ತದೆ. ಅವನು ಒಳಹೊರಗೆ ಪರಿಶುದ್ಧನಾಗುತ್ತಾನೆ. ಪರಿಸರಕ್ಕೆ ಬೇಕಾದ ಬದುಕು ಅವನದಾಗುತ್ತದೆ. ಸಜ್ಜನರ ಸಂಗವದು ಹೆಜ್ಜೇನು ಸವಿದಂತೆ ಎಂದು ಸರ್ವಜ್ಞ ಹೇಳಿರುವುದು ಅದಕ್ಕೇ.



# ಕೇರಳದ ಸಂತ–ಸಮಾಜ ಸುಧಾರಕ ಶ್ರೀ ನಾರಾಯಣ ಗುರುದೇವ್

ಎಂ. ಎಸ್. ಲಕ್ಷ್ಮಣಾಚಾರ್, ಎಂ. ಎಸ್. ಸಿ; ನಂ. 19/863ಡಿ. ನವೀನ್ ಬಿಲ್ಡಿಂಗ್ ಚಾಲಪುರಂ
ಕ್ಯಾಲಿಕಟ್–2

ಕೇರಳ ದೇಶವು ಕ್ರಾಂತಿಗಳ ಬೀಡು. ಪರಶುರಾಮನ ನಾಡೆಂದು ಹೇಳಿರುವ ಈ ನಾಡಿನಲ್ಲಿ ಹಲವಾರು ಮಹಾಪುರುಷರು ಜನ್ಮವೆತ್ತಿ ಸಾಮಾಜಿಕ ಸಾಂಸ್ಕೃತಿಕ ಧಾರ್ಮಿಕ ಕ್ರಾಂತಿಗಳನ್ನು ನಡೆಸಿದ್ದಾರೆ. ಇವರುಗಳು ಕೇರಳದ ಸಂಸ್ಕೃತಿಗೆ ಒಂದೊಂದು ಬಾರಿ ಒಂದೊಂದು ಬಗೆಯ ತಿರುವು ಕೊಟ್ಟು ಸಂಸ್ಕೃತಿಯ ಬೆಳವಣಿಗೆಗೆ ಕಾರಣರಾಗಿದ್ದಾರೆ. ಇವರುಗಳಲ್ಲಿ ತ್ರಿಮೂರ್ತಿಗಳಾದ ಆದಿಶಂಕರಾಚಾರ್ಯರು, ನಾರಾಯಣ ಭಟ್ಟದಿರಿ ಮತ್ತು ಶ್ರೀ ನಾರಾಯಣ ಗುರುದೇವ್‌ರವರು ಇಂದಿಗೂ ಕೇರಳದಲ್ಲಿ ಚಿರಸ್ಮರಣೀಯರು. ಐದನೆಯ ಶತಮಾನದಲ್ಲಿದ್ದ ಆದಿಶಂಕರಾಚಾರ್ಯರು ಅದ್ವೈತವನ್ನು ಪ್ರಸಾರಮಾಡಿದರೆ, ಹದಿನಾರನೆಯ ಶತಮಾನದಲ್ಲಿದ್ದ ಕವಿಯೂ ಸಂತಪುರುಷರೂ ಆದ ಸಂಸ್ಕೃತ ಪಂಡಿತ ಶಿರೋಮಣಿ ನಾರಾಯಣ ಭಟ್ಟದಿರಿ ಭಕ್ತಿಯ ಪ್ರಾಮುಖ್ಯವನ್ನು ವಿವರಿಸಿದರೆ, ಹತ್ತೊಂಬತ್ತನೆಯ ಶತಮಾನದಲ್ಲಿದ್ದ ಶ್ರೀ ನಾರಾಯಣ ಗುರುದೇವ್‌ರು ಸಂತ ಪುರುಷರೆನಿಸಿಕೊಂಡು ಸಮಾಜ ಸುಧಾರಣೆಯಲ್ಲಿಯೇ ತಮ್ಮ ಜೀವನವನ್ನು ಸಫಲಪಡಿಸಿ ಕೊಂಡರು.

ಅಂದು ಕೇರಳದಲ್ಲಿ ಬ್ರಾಹ್ಮಣರು, ಕ್ಷತ್ರಿಯರು, ನಾಯರ್‌ರು, ಈಳವರು ಪುಲಯರು; ಪರಯರು ಎಂಬ ಅನೇಕ ಜಾತಿಗಳಿದ್ದವು. ಬ್ರಾಹ್ಮಣರು ಉಚ್ಚಕುಲದವರೆನಿಸಿಕೊಂಡರೆ, ಪರಯರು ನಿಮ್ನ ವರ್ಗದವರೆನಿಸಿಕೊಂಡಿದ್ದರು. ಬ್ರಾಹ್ಮಣರು ನಾಯರ್‌ಗಳೊಂದಿಗೆ ಹತ್ತಿರ ನಿಂತು ಮಾತಾಡುವ ಯೋಗ್ಯತೆ ಆ ಕೀಳುಜಾತಿಯವರಿಗಿರಲಿಲ್ಲ. ಇದು ನಿಷಿದ್ಧವಾಗಿತ್ತು. ಅಕಸ್ಮಾತ್ತಾಗೆ ಮಾತಾಡಿ ಬಿಟ್ಟರೆ ಉಚ್ಚ ಜಾತಿಯವರಿಗೆ ಮೈಲಿಗೆಯಾಗುತ್ತಿತ್ತು. ಅವರು ಒಡನೆಯೇ ಸ್ನಾನಮಾಡಿ ಮನೆಗೆ ಬರಬೇಕಾಗುತ್ತಿತ್ತು. ಕೀಳು ಜಾತಿಯವರು ಹಾಗೆ ಮಾತಾಡುವುದೂ ಸಹ ಉಚ್ಚ ಜಾತಿಯವರಿಂದ ಒಂದು ನಿರ್ದಿಷ್ಟದೂರದಲ್ಲಿ ನಿಲ್ಲಬೇಕಾಗಿತ್ತು. ಜಾತಿಯ ಹೆಸರಿನಲ್ಲಿ ಅನೇಕ ದುರಾಚಾರಗಳು ಮೂರ್ಧನ್ಯಾವಸ್ಥೆಯನ್ನು ಮುಟ್ಟುತ್ತಿತ್ತೆನ್ನ ಬಹುದಿತ್ತು. ಕೀಳು ಜಾತಿಯವರು ಅಸ್ಪೃಶ್ಯರೂ, ಸಂಗಕ್ಕೆ ಅಯೋಗ್ಯರು, ಅಕಸ್ಮಾತ್ತಾಗಿ ಕಣ್ಣಿಗೆ ಬಿದ್ದರೇನೆ ಮೈಲಿಗೆಯೆನ್ನಿಸಿಕೊಳ್ಳುವವರೂ ಆಗಿದ್ದರು. ಅವರೇನಿದ್ದರೂ ಉಚ್ಚ ಜಾತಿಯವರ ಕೈಕೆಳಗೆ ದುಡಿದು ಅವರ ದಬ್ಬಾಳಿಕೆಗೆ ಗುರಿಯಾಗುತ್ತಿದ್ದರು. ಅಸ್ಪೃಶ್ಯರನ್ನು ಉಚ್ಚ ಜಾತಿಯವರು ಹೀನಾಯವಾಗಿ ಕಾಣುತ್ತಿದ್ದರು. ಪ್ರಾಣಿಗಳಿಗಿಂತ ಕಡೆಯಾಗಿ ಕಾಣುತ್ತಿದ್ದರು. ಆಗಿನ ಸಮಾಜಿಕ ಪರಿಸ್ಥಿತಿ ಬಿಗಡಾಯಿಸಿತ್ತು.

ಸಹವಾಸಗಳು ಹಲವಾರು, ವಸ್ತು ಅಥವಾ ವಿಚಾರದ ಸಹವಾಸವಿರ ಬಹುದು. ಇನ್ನೊಂದು ಜೀವಿಯ ಸಹವಾಸವಿರಬಹುದು. ನಮಗೆ ತಿಳಿದೋ ತಿಳಿಯದೆಯೋ ಒಂದೊಂದು ಸಹವಾಸಕ್ಕೆ ನಾವು ಸಿಲುಕುತ್ತೇವೆ. ಸಹವಾಸಗಳು ಎಷ್ಟು ಬಗೆಯೋ ಅವುಗಳ ಸ್ವರೂಪ, ಸಂಬಂಧ, ಸಫಲತೆಗಳಲ್ಲೂ ಅಷ್ಟು ಬಗೆ. ರಾಜಕಾರಣಿಯ ಸಹವಾಸಕ್ಕಿಂತ ಬುದ್ಧಿಜೀವಿಯ ಸಹವಾಸ ಭಿನ್ನವಾದುದು. ಸಂಸಾರಿಯ ಸಹವಾಸದ ಸುಖವನ್ನು ಸನ್ಯಾಸಿಯ ಸಹವಾಸದಲ್ಲಿ ನಿರೀಕ್ಷಿಸುವುದು ಕಷ್ಟ. ಶ್ರೀಮಂತರ ಸಹವಾಸ ಒಂದು ಬಗೆಯಾದರೆ ಶ್ರಮಜೀವಿಯ ಸಹವಾಸ ಒಂದು ಬಗೆ. ಕಳ್ಳರು, ಕುಡುಕರ ಸಹವಾಸವೇ ಬೇರೆ; ಸಾಹಸಿ, ಸಭ್ಯರ ಸಹವಾಸವೇ ಬೇರೆ. ಹೆಣ್ಣು-ಹೊನ್ನುಗಳ ಸಹವಾಸಕ್ಕಂತೂ ಸಾವಿರಾರು ಕಥೆಗಳಿವೆ. ಹೀಗೆಯೇ ದಡ್ಡರ ಸಹವಾಸ, ದಳ್ಳಾಳಿಗಳ ಸಹವಾಸ, ವಕೀಲ, ವೈದ್ಯರ ಸಹವಾಸ, ತಾಂತ್ರಿಕರ ಸಹವಾಸ, ಹುಡುಗ ಮುದುಕರ ಸಹವಾಸ, ಬೀಡಿ ಸಿಗರೇಟು ಸಹವಾಸ ನಾಟಕ ಸಿನಿಮ ಸಹವಾಸ ಹೀಗೆ ಲೆಕ್ಕವಿಲ್ಲದಷ್ಟು ಸಹವಾಸಗಳಿವೆ. ಇವುಗಳಲ್ಲಿ ಕೆಲವು ಬೇಕು; ಕೆಲವು ಬೇಡಗಳೇನೊ ಇದ್ದರೂ, ಯಾವುದರ ಅಥವಾ ಯಾರ ಸಹವಾಸದಿಂದ ಒಳ್ಳೆಯ ಪರಿಣಾಮವಾಗುವುದೋ ಅದು ಸತ್ಯಸಹವಾಸವೆನಿಸಿಕೊಳ್ಳುತ್ತದೆ.

ಸಾರ ಸಜ್ಜನರ ಸಂಗವದು ಲೇಸಯ್ಯ ಎಂದಿದ್ದಾರೆ ಶರಣರು. ಸಜ್ಜನರ ಸಹವಾಸದಿಂದ ನಮ್ಮಲ್ಲಿ ಸದ್ಗುಣ, ಸಚ್ಚಾರಿತ್ರ್ಯ ಸನ್ನಡತೆಗಳು ಅಳವಡುತ್ತವೆ ಅದೇ ದುಷ್ಟ ಶಕ್ತಿಗಳೊಡನೆ ಸಂಪರ್ಕವಿಟ್ಟು ಕೊಂಡರೆ ಅದು ನಮ್ಮನ್ನು ದುರ್ನಡತೆ ಮತ್ತು ನರಳಾಟಗಳ ಏಣಿ ಹತ್ತಿಸುತ್ತದೆ. ಆದ್ದರಿಂದ ಆಯ್ಕೆ ಅತ್ಯಂತ ಮುಖ್ಯವಾದುದು.

ಸತ್ಯಸಹವಾಸವು ನಾವು ಸಹಜವಾಗಿ ಮತ್ತು ಸಕ್ರಮವಾಗಿ ಬದುಕಲು ಮತ್ತು ನಿತ್ಯದ ಸಮಸ್ಯೆಗಳನ್ನು ಯುಕ್ತಾ ಯುಕ್ತವಾಗಿ ಬಗೆಹರಿಸಿಕೊಳ್ಳಲು ಅಗತ್ಯ ತರಬೇತಿ ನೀಡುತ್ತದೆ. ಸತ್ಸಂಗದಿಂದ ಸಣ್ಣತನ, ಪೂರ್ವಾಗ್ರಹ ಮತ್ತು ಪಕ್ಷಪಾತ ದೃಷ್ಟಿಗಳೆಲ್ಲ ನಮ್ಮಿಂದ ದೂರವಾಗುತ್ತದೆ. ಸತ್ಸಂಗಕ್ಕೆ ನಾವು ಅಂಟಿಕೊಳ್ಳದಿದ್ದರೆ ಉತ್ಥಾನಕ್ಕೆ ನಾವು ಪಡುವ ಪ್ರಾಮಾಣಿಕ ಹಂಬಲವು ವ್ಯರ್ಥವಾಗುತ್ತದೆ. ಒಳಿತು ಕೆಡುಕುಗಳ ವ್ಯತ್ಯಾಸವೇ ನಮಗೆ ತಿಳಿಯುವುದಿಲ್ಲ. ವಾಸ್ತವವಾಗಿ ಹೇಳುವುದಾದರೆ ನಮ್ಮ ವಕ್ರ ಐಹಿಕ ಪ್ರಲೋಭನೆಗಳನ್ನು ಪರಿವರ್ತಿಸಿ ನಮ್ಮನ್ನು ಸಜ್ಜನಿಕೆ, ಸಭ್ಯತೆ ಮತ್ತು ಸಹಜತೆಗಳ ಕಡೆ ತಿರುಗಿಸುವ ಶಿಕ್ಷಣ ದೊರೆಯುವುದು ಸತ್ಸಂಗದಿಂದ ಮಾತ್ರ. ಒಳ್ಳೆಯ ಸಹವಾಸದಿಂದ ವ್ಯಕ್ತಿಯ ಸ್ಥಾನಮಾನಗಳು ಉನ್ನತಗೊಳ್ಳುತ್ತವೆ. ಬಹುಮಟ್ಟಿಗೆ ನಮ್ಮ ವ್ಯಕ್ತಿತ್ವಕ್ಕೆ ನಮ್ಮ ಸಹವಾಸವೇ ಅಳತೆಗೋಲಾಗುತ್ತದೆ.

ಸತ್ಸಹವಾಸದಿಂದ ಸತ್ಪರಿಣಾಮ. ಅದರಿಂದ ವ್ಯಕ್ತಿಯ ಅಂತರಂಗ ಬಹಿರಂಗಗಳೆರಡಕ್ಕೂ ಸಂಸ್ಕಾರ ದೊರೆಯುತ್ತದೆ. ಅವನು ಒಳಹೊರಗೆ ಪರಿಶುದ್ಧನಾಗುತ್ತಾನೆ. ಪರಿಸರಕ್ಕೆ ಬೇಕಾದ ಬದುಕು ಅವನದಾಗುತ್ತದೆ. ಸಜ್ಜನರ ಸಂಗವದು ಹೆಜ್ಜೇನು ಸವಿದಂತೆ ಎಂದು ಸರ್ವಜ್ಞ ಹೇಳಿರುವುದು ಅದಕ್ಕೇ.



# ಕೇರಳದ ಸಂತ-ಸಮಾಜ ಸುಧಾರಕ ಶ್ರೀ ನಾರಾಯಣ ಗುರುದೇವ್

ಎಂ. ಎಸ್. ಲಕ್ಷ್ಮಣಾಚಾರ್, ಎಂ. ಎಸ್. ಸಿ; ನಂ. 19/863ಡಿ. ನವೀನ್ ಬಿಲ್ಡಿಂಗ್ ಚಾಲಪುರಂ
ಕ್ಯಾಲಿಕಟ್-2

ಕೇರಳ ದೇಶವು ಕ್ರಾಂತಿಗಳ ಬೀಡು. ಪರಶುರಾಮನ ನಾಡೆಂದು ಹೇಳಿರುವ ಈ ನಾಡಿನಲ್ಲಿ ಹಲವಾರು ಮಹಾಪುರುಷರು ಜನ್ಮವೆತ್ತಿ ಸಾಮಾಜಿಕ ಸಾಂಸ್ಕೃತಿಕ ಧಾರ್ಮಿಕ ಕ್ರಾಂತಿಗಳನ್ನು ನಡೆಸಿದ್ದಾರೆ. ಇವರುಗಳು ಕೇರಳದ ಸಂಸ್ಕೃತಿಗೆ ಒಂದೊಂದು ಬಾರಿ ಒಂದೊಂದು ಬಗೆಯ ತಿರುವು ಕೊಟ್ಟು ಸಂಸ್ಕೃತಿಯ ಬೆಳವಣಿಗೆಗೆ ಕಾರಣರಾಗಿದ್ದಾರೆ. ಇವರುಗಳಲ್ಲಿ ತ್ರಿಮೂರ್ತಿಗಳಾದ ಆದಿಶಂಕರಾಚಾರ್ಯರು, ನಾರಾಯಣ ಭಟ್ಟದಿರಿ ಮತ್ತು ಶ್ರೀ ನಾರಾಯಣ ಗುರುದೇವ್‌ರವರು ಇಂದಿಗೂ ಕೇರಳದಲ್ಲಿ ಚಿರಸ್ಮರಣೀಯರು. ಐದನೆಯ ಶತಮಾನದಲ್ಲಿದ್ದ ಆದಿಶಂಕರಾಚಾರ್ಯರು ಅದ್ವೈತವನ್ನು ಪ್ರಸಾರಮಾಡಿದರೆ, ಹದಿನಾರನೆಯ ಶತಮಾನದಲ್ಲಿದ್ದ ಕವಿಯೂ ಸಂತಪುರುಷರೂ ಆದ ಸಂಸ್ಕೃತ ಪಂಡಿತ ಶಿರೋಮಣಿ ನಾರಾಯಣ ಭಟ್ಟದಿರಿ ಭಕ್ತಿಯ ಪ್ರಾಮುಖ್ಯವನ್ನು ವಿವರಿಸಿದರೆ, ಹತ್ತೊಂಬತ್ತನೆಯ ಶತಮಾನದಲ್ಲಿದ್ದ ಶ್ರೀ ನಾರಾಯಣ ಗುರುದೇವ್‌ರು ಸಂತ ಪುರುಷ ರೆನಿಸಿಕೊಂಡು ಸಮಾಜ ಸುಧಾರಣೆಯಲ್ಲಿಯೇ ತಮ್ಮ ಜೀವನವನ್ನು ಸಫಲಪಡಿಸಿ ಕೊಂಡರು.

ಅಂದು ಕೇರಳದಲ್ಲಿ ಬ್ರಾಹ್ಮಣರು, ಕ್ಷತ್ರಿಯರು, ನಾಯರ್‌ರು, ಈಳವರು ಪುಲಯರು; ಪರಯರು ಎಂಬ ಅನೇಕ ಜಾತಿಗಳಿದ್ದವು. ಬ್ರಾಹ್ಮಣರು ಉಚ್ಚಕುಲದವರೆನಿಸಿಕೊಂಡರೆ, ಪರಯರು ನಿಮ್ನ ವರ್ಗದವರೆನಿಸಿಕೊಂಡಿದ್ದರು. ಬ್ರಾಹ್ಮಣರು ನಾಯರ್‌ಗಳೊಂದಿಗೆ ಹತ್ತಿರ ನಿಂತು ಮಾತಾಡುವ ಯೋಗ್ಯತೆ ಆ ಕೀಳುಜಾತಿಯವರಿಗಿರಲಿಲ್ಲ. ಇದು ನಿಷಿದ್ಧವಾಗಿತ್ತು. ಅಕಸ್ಮಾತ್ತಾಗೆ ಮಾತಾಡಿ ಬಿಟ್ಟರೆ ಉಚ್ಚ ಜಾತಿಯವರಿಗೆ ಮೈಲಿಗೆಯಾಗುತ್ತಿತ್ತು. ಅವರು ಒಡನೆಯೇ ಸ್ನಾನಮಾಡಿ ಮನೆಗೆ ಬರಬೇಕಾಗುತ್ತಿತ್ತು. ಕೀಳು ಜಾತಿಯವರು ಹಾಗೆ ಮಾತಾಡುವುದೂ ಸಹ ಉಚ್ಚ ಜಾತಿಯವರಿಂದ ಒಂದು ನಿರ್ದಿಷ್ಟದೂರದಲ್ಲಿ ನಿಲ್ಲಬೇಕಾಗಿತ್ತು. ಜಾತಿಯ ಹೆಸರಿನಲ್ಲಿ ಅನೇಕ ದುರಾಚಾರಗಳು ಮೂರ್ಧನ್ಯಾವಸ್ಥೆಯನ್ನು ಮುಟ್ಟುತ್ತಿತ್ತೆನ್ನ ಬಹುದಿತ್ತು. ಕೀಳು ಜಾತಿಯವರು ಅಸ್ಪೃಶ್ಯರೂ, ಸಂಗಕ್ಕೆ ಅಯೋಗ್ಯರು, ಅಕಸ್ಮಾತ್ತಾಗಿ ಕಣ್ಣಿಗೆ ಬಿದ್ದರೇನೆ ಮೈಲಿಗೆಯೆನ್ನಿಸಿಕೊಳ್ಳುವವರೂ ಆಗಿದ್ದರು. ಅವರೇನಿದ್ದರೂ ಉಚ್ಚ ಜಾತಿಯವರ ಕೈಕೆಳಗೆ ದುಡಿದು ಅವರ ದಬ್ಬಾಳಿಕೆಗೆ ಗುರಿಯಾಗುತ್ತಿದ್ದರು. ಅಸ್ಪೃಶ್ಯರನ್ನು ಉಚ್ಚ ಜಾತಿಯವರು ಹೀನಾಯವಾಗಿ ಕಾಣುತ್ತಿದ್ದರು. ಪ್ರಾಣಿಗಳಿಗಿಂತ ಕಡೆಯಾಗಿ ಕಾಣುತ್ತಿದ್ದರು. ಆಗಿನ ಸಮಾಜಿಕ ಪರಿಸ್ಥಿತಿ ಬಿಗಡಾಯಿಸಿತ್ತು.

ನಿಸ್ಸಹಾಯಕರಾದ ಈ ಕೀಳು ಜಾತಿಯ ಜನಗಳು ಮೂಕಪ್ರಾಣಿಗಳಂತೆ ಅನುಸರಿಸ ಬೇಕಾಗಿತ್ತು. ಇಂತಹ ಪರಿಸ್ಥಿತಿಯನ್ನು ನೋಡಿಯೇ ಕೇರಳವನ್ನು ಸಂದರ್ಶಿಸಿದ ಸ್ವಾಮಿ ವಿವೇಕಾನಂದರು ಈ ನಾಡನ್ನು 'ಭ್ರಾಂತಾಲಯ, (ಹುಚ್ಚರನಿವಾಸ) ಎಂದು ಕರೆದಿರಬೇಕು. ಇಂತಹ ದುಸ್ಥಿತಿಯಿಂದ ಕೇರಳವನ್ನು ಪಾರುಮಾಡಲು ಸತತವಾಗಿ ಶ್ರಮಿಸಿ ತಮ್ಮ ಪ್ರಯತ್ನದಲ್ಲಿ ಜಯಗಳಿಸಿ ವಿಜಯ ಪತಾಕೆಯನ್ನು ಹಾರಿಸಿದವರೇ ಸತ್ಪುರುಷರೂ ಸಮಾಜ ಸುಧಾರಕರೂ ಆದ ಶ್ರೀ ನಾರಾಯಣ ಗುರುದೇವ್.

**ಜೀವನ ಚರಿತ್ರೆ**

ಶ್ರೀ ನಾರಾಯಣ ಗುರುದೇವ್ (ಅವರನ್ನು ಬಾಲ್ಯದಲ್ಲಿ ಎಲ್ಲರೂ ನಾಣಿ ಅಥವಾ ನಾರಾಯಣ್ ಎಂದು ಕರೆಯುತ್ತಿದ್ದರು) ಕೇರಳದ ರಾಜಧಾನಿಯಾದ ತಿರುವನಂತಪುರಂ ಬಳಿ ಇದ್ದ ಚೆಂಬಳಂಡಿ ಎಂಬ ಗ್ರಾಮದಲ್ಲಿ ಈಳವಜಾತಿಗೆ ಸೇರಿದ ಒಂದು ಸಾಧಾರಣ ಕುಟುಂಬದಲ್ಲಿ 1854 ಆಗಸ್ಟ 28 ರಂದು ಜನಿಸಿದರು. ಬಾಲ್ಯದಿಂದ ಇವರು ಬಹು ತುಂಟನೆಂದೂ, ಅಗಾಧ ಸ್ಮರಣ ಶಕ್ತಿಯುಳ್ಳವನೆಂದೂ ಬುದ್ಧಿಶಾಲಿಯೆಂದೂ ಹೆಸರು ಪಡೆದಿದ್ದರು. ತಮ್ಮ ಪ್ರಾಥಮಿಕ ವಿದ್ಯಾಭ್ಯಾಸವನ್ನು ಸ್ವಗ್ರಾಮದಲ್ಲಿ ಮುಗಿಸಿದರು. ಆ ಕಾಲದಲ್ಲಿ ತಮ್ಮ ಸೋದರಮಾವನೊಂದಿಗೆ ಹೊಲ ಗದ್ದೆಯಲ್ಲಿ ಕೆಲಸ ಮಾಡಲು ಹೋಗುತ್ತಿದ್ದರು. ದೇವರಲ್ಲಿ ಅಗಾಧ ಭಕ್ತಿ, ವಿಶ್ವಾಸಗಳಿದ್ದುದರಿಂದ ದಿನವೂ ಮನೆಯ ಬಳಿಯೇ ಇದ್ದ ದೇವಸ್ಥಾನಕ್ಕೆ ಹೋಗಿ ಬಹು ಹೊತ್ತುಧ್ಯಾನ ಮಗ್ನರಾಗಿರುವರು. ಅದಲ್ಲದೆ ಆಗಾಗ ನಿರ್ಜನ ಪ್ರದೇಶಗಳಲ್ಲಿ ಏಕಾಕಿಯಾಗಿ ಕುಳಿತು ಅವರಿಗೆ ಚಿಂತಮಗ್ನರಾಗಿರಬೇಕೆನ್ನಿಸುತ್ತಿತ್ತು. ಕ್ರಮೇಣ ಅವರು ವೈರಾಗಿಯೂ ಆಧ್ಯಾತ್ಮಿಕ ಚಿಂತಕರೂ ಆದರು. ಇಂತಹ ಸಮಯದಲ್ಲೇ ಅವರಿಗೆ ಮಾತೃವಿಯೋಗವಾಗಿದ್ದು. ಆಗ ಅವರಿಗೆ ಕೇವಲ ಇಪ್ಪತ್ತೊಂದು ವರ್ಷ-ತಾಯಿಯ ಮರಣವು ಅವರ ಮನಸ್ಸಿನಲ್ಲಿ ಅತೀವ ಮಾರ್ಪಾಡುಗಳನ್ನು ಮಾಡಿತ್ತು.

ದಿನಗಳು ಕಳೆಯುತ್ತಿದ್ದಂತೆ ನಾರಾಯಣ್ ಪ್ರಾಪಂಚಿಕ ವಿಷಯಗಳಲ್ಲಿ ಉದಾಸೀನತೆಯನ್ನು ತೋರಿಸ ತೊಡಗಿದರು. ಆಗಲೇ ಅವರ ಸೋದರಮಾವನವರು ಅವನನ್ನು ಸಂಸ್ಕೃತದಲ್ಲಿ ಹೆಚ್ಚಿನಪಾಂಡಿತ್ಯ ಪಡೆಯಲು ಕರುನಾಗ ಪಳ್ಳಿಗೆ ಕಳುಹಿಸಿದ್ದು. ಈ ಸಮಯದಲ್ಲೇ ನಾರಾಯಣದೇವರಲ್ಲಿ ಕಾವ್ಯವಾಸನೆ ಜನಿಸಿದ್ದು. ಶ್ರೀ ಕೃಷ್ಣ ವಿಷ್ಣು ಮುಂತಾದ ದೇವತೆಗಳ ಮೇಲೆ ಸ್ತೋತ್ರಗಳನ್ನು ಈ ಸಮಯದಲ್ಲಿ ಬರೆದರು. ಸಂಸ್ಕೃತ ವಿದ್ಯಾಭ್ಯಾಸವನ್ನು ಕಾರಣಾಂತರಗಳಿಂದ ಮುಗಿಸಲಾಗಲಿಲ್ಲ. ತಮ್ಮ ಊರಿಗೆ ಹಿಂದಿರುಗಿ ಬಂದು ಪಾಠಶಾಲೆಯನ್ನು ತೆರೆದು ನೆರೆಹೊರೆಯವರ ಮಕ್ಕಳಿಗೆ ಪಾಠ ಹೇಳತೊಡಗಿದರು. ಆಗಲೂಸಹ ಪ್ರದೋಷ, ಅನಧ್ಯಯನ ದಿನಗಳಲ್ಲಿ ಊರ ಹೊರಗಿನ ಹೊಲಗದ್ದೆಗಳ ಮಧ್ಯೆ ಇರುವ ಬಂಡೆಗಳ ಮೇಲೆ ಕುಳಿತು ರಾತ್ರಿ ಬಹು



ಹೊತ್ತು ಚಿಂತಾಮಗ್ನರಾಗಿ ಕುಳಿತಿದ್ದು ಮನೆಗೆ ಹಿಂತಿರುಗುತ್ತಿದ್ದರು. ಇದನ್ನು ಗಮನಿಸುತ್ತಿದ್ದ ಮನೆಯಲ್ಲಿದ್ದವರು ನಾರಾಯಣರನ್ನು ಸಾಧಾರಣ ಜೀವನದ ಕಡೆಗೆ ತಿರುಗಿಸಬೇಕೆಂದು ಮದುವೆ ಗೊತ್ತುಮಾಡಿದರು. ವಿವಾಹಿತರಾದರೂ ಏನು ಫಲಕಾಣ-ಲಿಲ್ಲ. ಅವರ ಮನೋಗತಿ ಬದಲಾಗಲಿಲ್ಲ. ವೈವಾಹಿಕ ಜೀವನದಲ್ಲಿ ಏನೇನೂ ಆಸಕ್ತಿಯಿಲ್ಲದೆ ಮದುವೆಯಾಗಿಯೂ ಬ್ರಹ್ಮಚಾರಿಯಂತಿದ್ದರು. ಇದೇ ಸಮಯದಲ್ಲೇ ಅವರ ತಂದೆ ತೀರಿಹೋದದ್ದು. ಈ ಮರಣವು ಅವರ ಪ್ರಾಪಂಚಿಕ ವಿಮುಖತೆಯನ್ನು ಇನ್ನೂ ತೀವ್ರಗೊಳಿಸಿತು. ಕೊನೆಗೊಂದುದಿನ ಅವರು ಗೃಹತ್ಯಾಗ ಮಾಡಿ ಹೊರಟು ಹೋದರು.

ಬಹುಕಾಲ ಅವರು ಚಿಂತೆಯಲ್ಲೇ ಮುಳುಗಿ ಊರೂರು ಅಲೆದರು. ಹಲವಾರು ಪಂಡಿತರನ್ನು ಸಂದಿಸಿದರು. ತನ್ನ ಜ್ಞಾನವನ್ನು ವರ್ಧಿಸಿಕೊಂಡರು. ಅಷ್ಟಕ್ಕೇ ಮುಗಿಸದೆ ವಿವಿಧ ಜಾತಿ ಪಂಗಡಗಳಿಗೆ ಸೇರಿದವರನ್ನು ಕಂಡು ಅವರ ಬಾಳಿನ ರೀತಿ ವಿಧಾನಗಳನ್ನೆಲ್ಲಾ ತಿಳಿದು ಅವರ ಸುಖಗಳನ್ನರಿತು ಅನೇಕ ವಿಷಯಗಳನ್ನು ಕಲಿತರು. ಜಾತಿ ಸಂಪ್ರದಾಯಗಳಿಂದಾಗಿ ಸಮಾಜದಲ್ಲಿ ಬೆಳೆದಿರುವ ಅವ್ಯವಸ್ಥೆಗಳು, ದುರಾಚಾರಗಳೂ, ಕಷ್ಟನಷ್ಟಗಳನ್ನು ಕಂಡು ಕೇಳಿ ಅವರ ಕರುಳು ಹಿಂಡಿದಂತಾಯಿತು. ಅವರು ಕಾಡುಮೇಡುಗಳಲ್ಲಿ ವಾಸವಾಗಿದ್ದು ಸತ್ಯಾನ್ವೇಷಣೆಯನ್ನು ಕುರಿತಾದ ತೀವ್ರ ಆತ್ಮ ಪರೀಕ್ಷೆಯಲ್ಲಿ ಮುಳುಗಿದರು. ಮನಸ್ಸನ್ನು ನಿಯಂತ್ರಿಸಿಕೊಳ್ಳಲು ಬೇಕಾದ ಯೋಗ್ಯಾಭ್ಯಾಸ ನಡೆಸಿದರು. ಈ ಸಮಯದಲ್ಲೇ ಅವರು ಕೆಲನಾಟ್ಯವೈದ್ಯ ಚಿಕಿತ್ಸೆಯನ್ನು ತಿಳಿಯಲು ಸಾಧ್ಯವಾಗಿದ್ದು. ಕೇರಳದ ಮರುತ್ವ ಮಲೆಯಲ್ಲಿ ಬಹುಕಾಲ ತಪಸ್ಸುಮಾಡಿದರು. ಮತ್ತೆಯೂ ಅನೇಕ ಕಡೆಸುತ್ತಾಡಿದರು.

ಕೊನೆಗೆ ಅರವಿಪುರದಲ್ಲಿ ಬಂದು ನೆಲೆಸಿದರು. ಸುತ್ತಮುತ್ತಲಿನ ಗ್ರಾಮದ ಜನರು ಈ ಸಂತ ಪುರುಷರ ವಿಷಯ ತಿಳಿದು ಅವರ ಬಳಿ ಬರತೊಡಗಿದರು ಕೊನೆಗೆ ಅವರ ಉಪದೇಶವನ್ನು ಕೇಳಲು ಕಾತುರರಾಗಿ ಕಿಕ್ಕಿರಿಯ ತೊಡಗಿದರು. ಜನರು ಅವರನ್ನು ಗುರುದೇವ್ ಎಂದು ಸಂಭೋದಿಸ ತೊಡಗಿದರು. ಹಾಗೆ ಬಂದ ಜನಗಳಲ್ಲಿ ಅನೇಕರು ದೇವಸ್ಥಾನಕ್ಕೆ ಪ್ರವೇಶಿಸಲು ಯೋಗ್ಯತೆಯಿಲ್ಲದ ಅಸ್ಪೃಶ್ಯ ಜಾತಿಗೆ ಸೇರಿದವರು. ಒಂದು ದಿನ ಗುರುದೇವರು ಕೊಳವೊಂದರಲ್ಲಿ ಮುಳುಗಿ ಒಂದು ಶಿವಲಿಂಗದೊಂದಿಗೆ ಮೇಲೆದ್ದು ಬಂದು ಅದನ್ನು ಪ್ರತಿಷ್ಠಿಸಿದರು. ಅಲ್ಲೊಂದು ದೇವಸ್ಥಾನವನ್ನೇ ಕಟ್ಟಿದರು. ಅದನ್ನು ಅಸ್ಪೃಶ್ಯರಿಗೆ ಮಾತ್ರವಲ್ಲ ಮತ್ತೆಲ್ಲಾ ಜಾತಿಯವರಿಗೂ ಪ್ರವೇಶಿಸಲು ಅನುಮತಿಯಿತ್ತು. ಆ ಕಾಲದಲ್ಲಿ ವಿಗ್ರಹ ಪ್ರತಿಷ್ಠಾಪನೆಗೆ ಅರ್ಹರಾದವರು ಬ್ರಾಹ್ಮಣರು ಮಾತ್ರವಾಗಿತ್ತು. ಹೀಗೆ ಗುರುದೇವರು ಲಿಂಗ ಪ್ರತಿಷ್ಠೆ ಮಾಡಿದ್ದು ನೋಡಿ ಬ್ರಾಹ್ಮಣರು ಕುಪಿತರಾಗಲು ಅವರನ್ನು ಸಮಾಧಾನ ಪಡಿಸಲೋಸುಗವೆಂಬಂತೆ ಅವರಿಗೆ ಹೇಳಿದರು. 'ಅದಕ್ಕೇ ನಿಮಗೆ ಇಷ್ಟು ಕೋಪ? ನಾನು ಪ್ರತಿಷ್ಠೆ ಮಾಡಿದ್ದು ಈಳವರ ಶಿವನನ್ನಲ್ಲವೇ?" ಅವರು ಕಟ್ಟಿಸಿದ ಆ ದೇವಸ್ಥಾನದಲ್ಲಿ ಹೀಗೆ ಬರೆಸಿದ್ದಾರೆ.

ಜಾತಿ ಮತ ಭೇದ ದ್ವೇಷ
ಇದ್ಯಾವುದೂ ಇಲ್ಲದೆ ಸರ್ವರೂ
ಸೋದರತ್ವದಿಂದ ಬಾಳುವ
ಮಾದರಿಸ್ಥಳವಿದು

ಈ ದೇವಸ್ಥಾನವಲ್ಲದೆ ಆ ಗ್ರಾಮದಲ್ಲಿ ಒಂದು ಶಾಲೆಯನ್ನು, ಒಂದು ಧರ್ಮ ಸಂಘವನ್ನೂ ಸ್ಥಾಪಿಸಿದರು. ಆ ಸಂಘವೇ ಕೇರಳದಲ್ಲಿ ಇಂದು ಖ್ಯಾತಿವೆತ್ತಿರುವ ಶ್ರೀ ನಾರಾಯಣ ಧರ್ಮ ಪರಿಪಾಲನ ಸಂಘ (ಎಸ್.ಎನ್.ಡಿ.ಪಿ) ಈ ಸಂಘದ ಶಾಖೆಗಳು ಕೇರಳಾದ್ಯಂತ ಪ್ರವರ್ತಿಸ ತೊಡಗಿದುವು.

ಕೇರಳದ ಪ್ರಖ್ಯಾತ ಮಹಾಕವಿ ಕುಮಾರ ನಾಶಾನ್ ಶ್ರೀ ನಾರಾಯಣ ಗುರುದೇವರ ಆತ್ಮೀಯ ಶಿಷ್ಯರಾಗಿದ್ದನು. ಗುರುದೇವರು ಕುಮಾರುವನ್ನು ಕಂಡದ್ದು ಆತನ ಬಾಲ್ಯಕಾಲದಲ್ಲಿ. ಆಗ ಬಾಲಕ ಕುಮಾರುವು ರೋಗಿಷ್ಠನಾಗಿದ್ದನು. ಗುರುದೇವ್ ಕೊಟ್ಟ ಗಿಡಮೂಲಿಕೆ ಔಷಧಿಗಳಿಂದ ಆತನಿಗೆ ಗುಣವಾಯಿತು. ಅನಂತರ ಗುರುದೇವ್‌ರ ಅಭೀಷ್ಟದಂತೆ ತನ್ನ ತಂದೆಯ ಅನುಮತಿ ಪಡೆದು ಗುರುದೇವ್‌ರ ಶಿಷ್ಯನಾಗಿ ಅವರೊಂದಿಗೆ ತಿರುಗಾಡತೊಡಗಿದನು. ಗುರುದೇವ್ ತಮ್ಮ ಅಭೂತ ಪೂರ್ವಸಿದ್ಧಿಯಿಂದ ಎಷ್ಟೋಜನರ ರೋಗವನ್ನು ಗುಣ ಮಾಡಿದರು. ಕುಮಾರುವಿನ ಕಾವ್ಯ ವಾಸನೆಯನ್ನು ಕಂಡ ಗುರುದೇವ್ ಒಮ್ಮೆ ತಮ್ಮ ಪ್ರವಾಸಕಾಲದಲ್ಲಿ ಬೆಂಗಳೂರಿಗೆ ಬಂದಿದ್ದಾಗ ಅಲ್ಲಿ ತಮ್ಮ ಶಿಷ್ಯತ್ವವನ್ನು ಸ್ವೀಕರಿಸಿದ್ದ ಡಾ॥ ಪಲ್ಪು ಎಂಬುವರ ಬಳಿ ಕುಮಾರುವನ್ನು ಬಿಟ್ಟು ಆತನಿಗೆ ಸಂಸ್ಕೃತದಲ್ಲಿ ಹೆಚ್ಚಿನ ಪಾಂಡಿತ್ಯವನ್ನು ಪಡೆಯಲು ಅನುಕೂಲ ಮಾಡಿಕೊಟ್ಟರು. ಹಾಗೆ. ಕುಮಾರು ಮೈಸೂರಿನ ಚಾಮರಾಜೇಂದ್ರ ಸಂಸ್ಕೃತ ಮಹಾ ಪಾಠಶಾಲೆಯಲ್ಲಿ ಹೆಚ್ಚಿನ ಸಂಸ್ಕೃತ ಪಾಂಡಿತ್ಯವನ್ನು ಪಡೆದನು.

ಪ್ರವಾಸ ಮಾಡುತ್ತಿದ್ದ ಗುರುದೇವ್ ಕೊನೆಗೆ ವರ್ಕಲ ಎಂಬ ಸ್ಥಳಕ್ಕೆ ಬಂದರು. ಇಲ್ಲಿಯ ಗುಡ್ಡಪ್ರದೇಶವು ಅತಿರಮಣೀಯವಾದದ್ದು. ಈ ಸ್ಥಳವನ್ನು ದಕ್ಷಿಣ ಕಾಶಿಯೆಂದು ಕರೆಯುತ್ತಾರೆ. ಪ್ರಕೃತಿ ರಮಣೀಯವಾದವು. ಈ ಸ್ಥಳವು ಗುರುದೇವರಿಗೆ ಬಲು ಇಷ್ಟವಾಯಿತು. ಗುರುದೇವರು ತಮಗೆ ದಾನವಾಗಿ ದೊರಕಿದ ಅಲ್ಲಿನ ಸ್ಥಳದಲ್ಲಿ ದೇವಸ್ಥಾನವೊಂದನ್ನು ಕಟ್ಟಿಸಿದರು. ಅಲ್ಲಿಗೆ ಈಗಲೂ ಈಳವ ಜಾತಿಗೆ ಸೇರಿದವರು ಕರ್ಕಟಕ ಮಾಸದ ಅಮಾವಾಸ್ಯೆಯಂದು ತರ್ಪಣ ಮಾಡಲು ಹೋಗುತ್ತಾರೆ. ದೇವಸ್ಥಾನದ ಸುತ್ತಮುತ್ತ ಪುಷ್ಪವೃಕ್ಷಲತಾದಿಗಳನ್ನು ಬೆಳೆಸಿ ಅತಿಮನೋಹರ ಸ್ಥಳವನ್ನಾಗಿ ಮಾಡಲಾಯಿತು. ಔಷಧ ಶಕ್ತಿಯುಳ್ಳ ನೀರಿನ ಚಿಲುಮೆಗಳನ್ನು



ಆ ಪ್ರದೇಶದಲ್ಲಿ ಧಾರಾಳವಾಗಿ ಕಾಣಬಹುದು. ಆ ಪ್ರದೇಶವನ್ನು ನಾರಾಯಣ ಗುರುದೇವರು ಶಿವಗಿರಿಯೆಂದು ಹೆಸರಿಟ್ಟುಕರೆದರು. ಅಲ್ಲಿ 1912 ರಲ್ಲಿ ಶಾರದಾ ಮಂದಿರವನ್ನು ಸ್ಥಾಪಿಸಿದರು. ತೀರ್ಥಸ್ಥಳವಾದ ಆ ಶಿವಗಿರಿಗೆ ಇಂದು ಅನೇಕ ಭಕ್ತ-ಜನರು ಪೀತಾಂಬರ (ಹಳದಿವಸ್ತ್ರ) ವನ್ನು ಧರಿಸಿ ಯಾತ್ರೆಮಾಡುತ್ತಾರೆ.

ಮಹಾತ್ಮಗಾಂಧಿ, ಮಹಾಕವಿ ರವೀಂದ್ರನಾಥ ಠಾಕೂರ್, ಪಂಡಿತ ಜವಹರ ಲಾಲ್ ನೆಹರೂ ಮುಂತಾದ ಮಹಾಪುರುಷರು ಗುರುದೇವರ ಆಹ್ವಾನಕ್ಕೆ ಮನ್ನಣೆಯಿತ್ತು ಈ ಶಿವಗಿರಿಯನ್ನು ಸಂದರ್ಶಿಸಿ ಸ್ವಾಮಿಗಳುನಡೆಸುತ್ತಿದ್ದ ಕಾಯಕ ಕಲಾಪಗಳನ್ನು ಅಭಿನಂದಿಸಿದ್ದಾರೆ.

ಕೇರಳಾದ ಮಲಬಾರ್ ಪ್ರದೇಶವನ್ನು ಸಂದರ್ಶಿಸಲು ಅಲ್ಲಿಯ ಜನರು ಬೇಡಿಕೊಳ್ಳಲು ಅವರು ಪ್ರವಾಸ ಹೋಗಿ ಆ ಪ್ರದೇಶಗಳನ್ನು ಸಂದರ್ಶಿಸಿ ಅಲ್ಲಲ್ಲಿ ಅನೇಕ ದೇವಸ್ಥಾನಗಳನ್ನು ಕಟ್ಟಿಸಿದರು. ಹಾಗೆ ನಡೆಸಿದ ಪ್ರವಾಸಿಗಳಲ್ಲಿ 1910ರಲ್ಲಿ ಕಲ್ಲಿಕೋಟೆಗೆ ಬಂದಾಗ ಶಿವಲಿಂಗ, ಸುಬ್ರಮಣ್ಯ, ಗಣಪತಿ, ಶಾಸ್ತ್ರಾ (ಅಯ್ಯಪ್ಪನ್) ಎನ್ನೀ ದೇವತೆಗಳನ್ನು ಪ್ರತಿಷ್ಠಿಸಿದರು. ಆ ದೇವಸ್ಥಾನವೇ ಇಂದು ಹೆಸರುವಾಸಿಯಾಗಿರುವ ಶ್ರೀಕಂಠೇಶ್ವರ ಕ್ಷೇತ್ರ. ಅಲ್ಲಿಂದ ಕರ್ನಾಟಕ ಸಂಸ್ಥಾನದಲ್ಲಿನ ಮಂಗಳೂರಿಗೆ ಸಹ ಹೋಗಿದ್ದರು. ಇದು ಅಲ್ಲಿನ ತುಳುನಾಡಿನ ತೀಯರುಗಳು (ಬಿಲ್ಲವರ್) ಬೇಡಿಕೊಂಡಿದ್ದ ಕಾರಣವಾಗಿತ್ತು. ಕೇರಳದ ಆಲುವಾರಿಲ (ಆಲ್ವೆ-Alwaya) ಎಂಬ ಸ್ಥಳದಲ್ಲಿ ಗುರುದೇವ್ ಅದ್ವೈತಾಶ್ರಮವೊಂದನ್ನು, ಸಂಸ್ಕೃತ ವಿದ್ಯಾಲಯವನ್ನು ಸ್ಥಾಪಿಸಿದರು. ಜನಗಳಿಗೆ, ಅದರಲ್ಲೂ ಕೀಳು ಜಾತಿಯವರಿಗೆ, ಓದು ಬರೆಹ ಕಲಿಸಲು ಅಲ್ಲಲ್ಲಿ ಅನೇಕ ವಿದ್ಯಾಲಯಗಳನ್ನು ಪ್ರಾರಂಭಿಸಿದರು.

1927ರ ಉತ್ತರಾರ್ಧದಲ್ಲಿ ವಾರ್ಧಕ್ಯ ಸಂಬಂಧವಾದ ರೋಗದಿಂದ ಗುರು-ದೇವರು ಹಾಸಿಗೆ ಹಿಡಿದರು. ಅನಂತರ ಸ್ವಲ್ಪ ಮಟ್ಟಿಗೆ ಚೇತರಿಸಿ ಕೊಂಡರೂ 1928 ಸೆಪ್ಟಂಬರ್‌ನಲ್ಲಿ ಪುನಃ ಅವರು ರೋಗಗ್ರಸ್ಥರಾಗಿ ಸೆಪ್ಟಂಬರ್ 20 ರಂದು ಸಮಾಧಿಸ್ಥರಾದರು.

## ಆದರ್ಶ ಜೀವನ ಮತ್ತು ಉಪದೇಶಗಳು.

ಗುರುದೇವ್ ತಮ್ಮ ಬಾಳಿನಲ್ಲಿ ಮೊದಲಿನಿಂದ ಕೊನೆಯವರೆಗೂ ಬಹು ಸರಳ ಜೀವನವನ್ನೇ ನಡೆಸಿದರು. ಅನ್ನ ಆಹಾರ, ಉಡುಪು ಮೊದಲಾದ ಎಲ್ಲಾ ವಿಷಯಗಳಲ್ಲೂ ಅವರು ಈ ಸರಳತೆಯನ್ನು ತೋರಿಸಿದರು. ಅವರ ಉಡುಪು ಒಂದು ಪಂಚೆ ಮತ್ತು ಒಂದು ಮೇಲ್ವಸ್ತ್ರವಾಗಿತ್ತು. ಅವರು ಶಿವಗಿರಿಯಲ್ಲೇ ವಾಸಿಸುತ್ತಿದ್ದರು.

ಕೇವಲ ಹತ್ತಡಿ ಚದರದ ಒಂದು ಪ್ರತ್ಯೇಕ ಕೋಣೆಯಲ್ಲಿ. ಅದು ಅವರು ಜನಿಸಿದ ಚೆಂಬಿಳಂದಿಯಲ್ಲಿನ ತಮ್ಮ ಗುಡಿಸಲನ್ನು ನೆನಪಿಗೆ ತರುತ್ತಿತ್ತು. ಅವರ ಸ್ವತ್ತೆಂದರೆ ಒಂದು ನೀರಿನ ಪಾತ್ರೆ ಮತ್ತು ಒಂದು ದೊಡ್ಡ ಬೆತ್ತವಾಗಿತ್ತು. ಅವರು ಉಡುತ್ತಿದ್ದ ಬಟ್ಟೆಗಳನ್ನು ಸುತ್ತುಮುತ್ತಲಿನ ಸ್ಥಳವನ್ನು ಯಾವಾಗಲೂ ಸ್ವಚ್ಛವಾಗಿಡುತ್ತಿದ್ದರು. ಅವರ ಮೈಕಟ್ಟು, ಆ ಸೌಮ್ಯಮುಖ ಯಾರನ್ನೇ ಆಗಲಿ ಆಕರ್ಷಿಸುವಂತಹುದು. ಅವರ ಸಂಭಾಷಣೆಯಲ್ಲಿ ಮಾಧುರ್ಯವೂ, ನಯನೈಪುಣ್ಯವೂ ವಶೀಕರಣ ಶಕ್ತಿಯೂ ಇತ್ತು. ಆನಂದಪ್ರದವೂ, ಸೂಕ್ಷ್ಮಜ್ಞಾನವುಳ್ಳದ್ದೂ ದಯಾ ಮಾಧುರ್ಯವುಳ್ಳದ್ದೂ ಆದ ಅವರ ಮಾತುಗಳನ್ನು ಕೇಳಲು ಆಬಾಲ ವೃದ್ಧರೂ; ಪಂಡಿತಪಾಮರರೂ ಎಲ್ಲರೂ ಸದಾ ಒಟ್ಟುಗೂಡುತ್ತಿದ್ದರು. ಆಹ್ಲಾದ ಭರಿತರಾಗಿ ಕಿಕ್ಕಿರಿಯುತ್ತಿದ್ದರು. ನಾರಾಯಣ ಗುರುದೇವರು ತಾವು ತಮ್ಮ ಅಂತಸ್ತನ್ನು ಹೆಚ್ಚಿಸಿಕೊಂಡದ್ದು ಮಾತ್ರವಲ್ಲ ದೀನದಲಿತರನ್ನು ಉದ್ಧಾರಮಾಡಿದರು.

ಗುರುದೇವರು ಲೋಕೋದ್ಧಾರಕ್ಕಾಗಿ ತಮ್ಮ ಬಾಳನ್ನೇ ಅರ್ಪಿಸಿದರು. ಜನರ ಜೀವನವನ್ನು ತಿದ್ದುವುದು, ದೌರ್ಬಲ್ಯಗಳನ್ನು ತೊಡೆಯುವುದು, ಸುದ್ಗುಣಗಳನ್ನು ಶಕ್ತಿಯುತವಾಗಿ ಮಾಡುವುದು ದುರಾಚಾರಗಳನ್ನು, ನೀಚ ಸಂಪ್ರದಾಯಗಳನ್ನು ತೊಡೆಯುವುದು, ಅವರಲ್ಲಿರುವ ಸ್ವಾತಂತ್ರ್ಯ ಪ್ರಜ್ಞೆಯನ್ನು ಹೊಡೆದೆಬ್ಬಿಸುವುದು ಇದೇ ಅವರ ಪ್ರಧಾನ ಉದ್ದೇಶವಾಗಿತ್ತು ಅವರು ಈ ಪ್ರಧಾನ ಹೇತುವನ್ನು ಮನಸ್ಸಿನಲ್ಲಿಟ್ಟುಕೊಂಡೇ ಅನೇಕ ಕಾರ್ಯಕ್ರಮಗಳನ್ನು ರೂಪೀಕರಿಸಿದ್ದರು. ಅನಂತರದ ಕಾರ್ಯಕ್ರಮಗಳೆಂದರೆ ವಿದ್ಯಾದಾನ, ಚಳುವಳಿ, ಸಾಮಾಜಿಕ ಪ್ರಜ್ಞೆ, ರಾಷ್ಟ್ರೀಯ ಜಾಗೃತಿ ಮುಂತಾದುವುಗಳಾಗಿದ್ದವು. ತದನಂತರ ಶಕ್ತಿಯುತವಾದ ಸಂಸ್ಥೆಯನ್ನು ಸ್ಥಾಪಿಸಿ ಅನುಯಾಯಿಗಳನ್ನು ಒಟ್ಟುಗೂಡಿಸಿ, "ಮನುಷ್ಯನಿಗಿರುವುದು ಒಂದೇ ಜಾತಿ, ಒಂದೇ ಮತ, ಒಂದೇ ದೇವರು," "ಜಾತಿ ಕೇಳಬೇಡ, ಹೇಳಬೇಡ, ಚಿಂತಿಸಬೇಡ," "ಮತವೇನೇ ಆಗಲಿ ಮನುಷ್ಯನು ಒಳ್ಳೆಯವನಾದರೆ ಸಾಕು" ಎಂಬೀ ಜ್ಞಾನೋಪದೇಶಗಳನ್ನೇ ಕೇರಳಾದ್ಯಂತ ಅವರು ಎಲ್ಲೆಡೆಯಲ್ಲೂ ಹರಡಲು ಶ್ರಮಿಸಿದರು. ಈ ಉದ್ದೇಶಗಳಲ್ಲಿ ತಮ್ಮ ಸತತ ಪರಿಶ್ರಮದಿಂದ ವಿಜಯಿಯಾದರು.

ಜನಗಳಲ್ಲಿದ್ದ ಬಹು ಪತಿತ್ವ, ಬಹು ಪತ್ನಿತ್ವ ಮುಂತಾದ ಅನಾಗರೀಕ ಸಂಪ್ರದಾಯಗಳನ್ನು, ಮೃಗಬಲಿ, ಮದ್ಯಪಾನ ಇವುಗಳನ್ನವರು ಖಂಡಿಸಿದ್ದರು. ಅವುಗಳನ್ನು, ನಿರ್ಮೂಲಿಸಲು ಸತತವಾಗಿ ಶ್ರಮಿಸಿದರು. ಅವರು ಅಸ್ಪೃಶ್ಯರತ್ತ ತಮ್ಮ ವಿಶೇಷ ಗಮನವನ್ನು ಹರಿಸಿದ್ದರು. ಇವರಿಗೆ ಬೇಕಾದ ವಿದ್ಯೆಯನ್ನು ಕೊಡಿಸಿದರು. ಅವರನ್ನು ಸಾಮಾಜಿಕವಾಗಿಯೂ ಆತ್ಮೀಯವಾಗಿಯೂ ಮುಂದಕ್ಕೆ ತಂದರು. ಜಾತಿ ಮತ ಭೇದಗಳನ್ನು ತೊಡೆದು ಹಾಕಬೇಕೆಂದು ಉಪದೇಶಿಸಿದರು.



ಶ್ರೀ ನಾರಾಯಣ ಗುರುದೇವ್‌ರ ಬಗ್ಗೆ ಮಹಾಕವಿ ರವೀಂದ್ರನಾಥ ಟಾಗೋರ್‌ರು ಹೇಳಿರುವುದು ಸ್ತುತ್ಯಾರ್ಹವಾಗಿದೆ.

I have been touring different parts of the world. During these travels I have had the good fortune to come into contract with several saints and Maharshi But I have frankly to admit that I have never come across one who is spiritully greater than swamy Sri Narayanaguru of Malayalam may, a person who is on a par with him in spiritual attainments.........."

ಶ್ರೀ ನಾರಾಯಣ ಗುರುದೇವ್‌ರಿಗೆ ಇದಕ್ಕಿಂತ ಒಂದು ಹೆಚ್ಚು ಸ್ವಾರಸ್ಯವುಳ್ಳ ಮತ್ತು ಯೋಗ್ಯವಾದ ಗೌರವದ ಕಾಣಿಕೆ ಮತ್ತೊಂದಿಲ್ಲ.

# ವಿದ್ಯಾರ್ಥಿ ಜೀವನದ ಬೆಳಕು ಸರಣಿ.

ಲೇಖಕ: ಬಿ. ಎಸ್. ಕೃಷ್ಣಮೂರ್ತಿ, ನಂ. 5, ಸೀತಾವಿಲಾಸ ರಸ್ತೆ, ಮೈಸೂರು-570 024.

ಲೇಖನ—೨.

**ವಿದ್ಯಾರ್ಥಿಜೀವನ :** ರಾಷ್ಟ್ರಕವಿ ಶ್ರೀಯುತ ಕು, ವೆಂ. ಪು. ರವರು ಹೇಳುವುದೇ ನೆಂದರೆ, ವಿದ್ಯಾರ್ಥಿಜೀವನವು ಒಂದು ತಪಸ್ಸಾಧನೆ ! ಪ್ರತಿಯೊಬ್ಬ ವಿದಾರ್ಥಿಯೂ ದಿಟ್ಟನಾದ ಒಬ್ಬ ಗೌರವ ತಪಸ್ವಿ, ವಿದ್ಯಾರ್ಜನೆ ಸಮ್ಯಯುವೆಂದರೆ ಆತ್ಮ ಶಕ್ತಿ ಸಂಗ್ರಹ ಕಾಲ. ಬುದ್ಧಿಯನ್ನು ಮಸೆದು, ಭಾವವನ್ನು ಕಡೆದು, ಕವಿಗಳಕಾವ್ಯಗಳಲ್ಲಿಯೂ ತತ್ವಜ್ಞರ ದರ್ಶನಗಳಲ್ಲಿಯೂ, ವೈಜ್ಞಾನಿಕ ಸಂಶೋಧನೆಗಳಲ್ಲಿಯೂ, ರಾಷ್ಟ್ರರಚನಾ ಸಮರ್ಥರ ರಾಜಕೀಯಶಾಸ್ತ್ರಗಳಲ್ಲಿಯೂ, ಮನಸ್ಸನ್ನು ರಚಿಸಿ, ಆಕೆಯಮನೋ-. ಮಂದಿರದಲ್ಲಿ ಸ್ಥಾಪಿಸಲು ಬದ್ಧಕಂಕಣವಾಗಬೇಕು-ವಿದ್ಯಾರ್ಥಿಗಳು ಬತ್ತಬೆಳೆಯುವ ಗದ್ದೆಗಳಾಗಬೇಕು. ಬರಿಯ ಕಾಲಿಚೀಲಗಳಾಬಾರದು. "

ವೇದಧರ್ಮದ ಪ್ರಕಾರ ವಿದ್ಯಾರ್ಥಿಜೀವನವು ಗೃಹಸ್ಥ ಮತ್ತು ವಾನಪ್ರಸ್ತಾಶ್ರಮಗಳಿಗೆ ಪೂರಕವಾಗಿದೆ. ವಿದ್ಯಾರ್ಥಿಯೆಂದರೆ ಸಮಾಜ ಜೀವನಕ್ಕೆ ಸೇರಿದವನಾಗಿ ಜೀವನ ರಹಸ್ಯವನ್ನು ಅರಿಯಲುಶಕ್ತನಾಗಿರುತ್ತಾನೆ. ಇತರರಿಗೆ ಹಾನಿಯಾಗದಂತೆ, ಜೀವನ ವಿಧಾನದಿಂದ ಸಹಬಾಳ್ವೆನಡೆಸುವುದನ್ನು ಕಲಿಯುವುದು ಇವನ ಗುರಿಯಾ-ಗಿರಬೇಕು.

ಈ ದೆಸೆಯಲ್ಲಿ ವಿದ್ಯೆ ಕಲಿಯುವುದೇಮೂಲಾಧಾರ. ಅಕ್ಷರಜ್ಞಾನದಿಂದ ಪ್ರಾರಂಭವಾಗಿಸಿದ್ಧಿ ಹೊಂದಿ, ಪುಸ್ತಕಲೋಕಕ್ಕೆ ಏರುತ್ತಾನೆ. ಸಾಹಿತ್ಯದಸವಿಯುಂಡು ವೃದ್ಧಿಯಾಗಿ ಜ್ಞಾನಸಾರವನ್ನು ಹೀರುವನು. ಸಾಹಿತ್ಯವು ಸಮಾಜದ ಕೈಗನ್ನಡಿ. ಆದುದರಿಂದ ಅದು ಸ್ಥಿರವಾಗಿ ಸಾಹಿತ್ಯವಾಗಿ ನೆಲಸುತ್ತದೆ.

ವಿದ್ಯಾರ್ಥಿದೆಸೆಯು ಜೀವನದ ಪರಮ ಪವಿತ್ರ ಸನ್ನಿವೇಶ ! ಈ ವೇಳೆಯಲ್ಲಿ ಅವರು ಕಲಿಯ ಬೇಕಾದುದನ್ನೆಲ್ಲಾ ಕಲಿತು ಪ್ರಾವೀಣ್ಯತೆಯನ್ನು ಹೊಂದುವಸಮಯ ಯಾವವಿಧವಾದ ಕಷ್ಟವಾಗಲಿ, ನೋವಾಗಲಿ, ಜವಾಬ್ದಾರಿಯಾಗಲಿ ಇರದು ವಿದ್ಯಾಭ್ಯಾಸ ಮಾಡುವುದೊಂದೇ ಏಕಮೇವ ಗುರಿಇರುತ್ತದೆ. ಚಿತ್ತಸ್ಥೈರ್ಯದಿಂದಲೂ ವಿದ್ಯೆ ಉತ್ಸಾಹದಿಂದಲೂ, ವಿದ್ಯೆ ಕಲಿತುಜ್ಞಾನವನ್ನಾರ್ಜಿಸಬೇಕು. ಆಗಲೇ ಮನಸ್ಸು ಪರಿ. ಪಕ್ವವಾಗುವಸಮಯ. ಇದನ್ನು ಸದುಪಯೋಗ ಪಡಿಸಿಕೊಳ್ಳಲು ಆತುರದಿಂದಿರ-ಬೇಕು.



"ವಿದ್ಯಾ ತುರಾಣಾಂನಸುಖಂನನಿದ್ರಾ' ಎಂಬಂತೆ ವಿದ್ಯಾ ಲಾಭದಆಸೆ ಇರುವವರಿಗೆ ಸುಖಾಭಿಲಾಷೆಯ ಆಸೆ ಇರಬಾರದು. ವಿದ್ಯಾ ಸಾಧಕನಿಗೆ ಸುಖವೆಲ್ಲಿಯದು ? ಸುಖಲೋಲನಿಗೆ ವಿದ್ಯೆ ಎಲ್ಲಿರುತ್ತೆ ? ಆದ್ದರಿಂದ ಸಂಪೂರ್ಣವಾಗಿ ವಿದ್ಯೆಯ ಕಡೆ ಮನಸ್ಸನ್ನು ಸ್ಥಿರಗೊಳಿಸಿ ತಮ್ಮ ವಿದ್ಯಾ ಲಾಭದಾಸೆಯನ್ನು ಪೂರ್ಣಮಾಡಿ-ಕೊಳ್ಳಬೇಕು.

ಜ್ಞಾನಾರ್ಜನೆಗೆ ಏಕನಿಷ್ಠೆ ಅತ್ಯಾವಶ್ಯಕ. ಆತ್ಮವೂ ಪರಿಶುದ್ಧವಿರಬೇಕು. ಇದರ ಪ್ರಾಪ್ತಿಗೆ ನಿಷ್ಠೆಯ ಬ್ರಹ್ಮಚರ್ಯೆಯೂ ಬಹುಮುಖವಾದ ಅಂಶ. ವಿದ್ಯಾ ಸಿದ್ಧಿ ಪಡೆಯಬೇಕೆಂಬುವ ನಿಷ್ಠೆ ಮತ್ತು ಪ್ರಾಮಾಣಿಕ ಸಂಕಲ್ಪವೂ ಕೂಡಿರಬೇಕು ಹೆಚ್ಚು ತಿಳಿಯುವ ಆತುರವೂ, ಕುತೂಹಲವೂ ಅತ್ಯಾವಶ್ಯಕ. ಇಲ್ಲವಾದರೆ ಕಡಿವಾಣ ಯಿಲ್ಲದ ಕುದುರೆಯಂತೆ ಮನಸ್ಸು ಚಲಿಸಿದ್ದಾದರೆ ಜ್ಞಾನಾರ್ಜನೆಯ ಹಾದಿ ತಪ್ಪಿ-ಹೋಗುತ್ತದೆ.

ವಿದ್ಯಾರ್ಥಿಗಳಿಗೆ ಕಷ್ಟ, ಕಾರ್ಪಣ್ಯಗಳ ಶಂಕೆ ಇಲ್ಲದಿರುವುದರಿಂದ ಅನೇಕ-ರೀತಿಯ ಸುಖದ ಕನಸುಕಾಣುತ್ತಿರುವುದು ಸುಳ್ಳೆಂಗಾದೀತು? ಆಸುಖಗಳನ್ನು ಸವಿ-ಯುವ ಆತುರ. ಆಕಾಂಕ್ಷೆ ಉತ್ತೇಜನ ಕೊಡುತ್ತದೆ. ಈ ಸಮಯದಲ್ಲಿ ಮನಸ್ಸಿನ ಹತೋಟ ತಪ್ಪಿದರೆ ವಿದ್ಯಾರ್ಜನೆಯ ಗುರಿದೂರವಾಗುತ್ತದೆ. ಆಗ ಅಸಹ್ಯವೂ-ಅಸಭ್ಯವೂ, ಆದ ಚಟುವಟಿಕೆಗಳಿಗೆ ಬಲಿಬೀಳುವುದು ನಿಶ್ಚಿತ ! ಅಸಹ್ಯಹೀನಕೃತ್ಯಗಳು, ಅನೀತಿಕಡೆಗೆ ಮನಸ್ಸು ಜೋತುಬಿದ್ದಾಗ ಬುದ್ಧಿಚಂಚಲವಾಗಿ ಸುಳ್ಳು ಕಪಟ, ವಂಚನೆಗಳಿಗೆಬಲಿಬೀಳ ಬೇಕಾಗುವುದು. ಇದರಿಂದಾಗಿ ದುಷ್ಟ ಪರಿಣಾಮ ವಿದ್ಯಾಭ್ಯಾಸದ ಮೂಲ ಉದ್ದೇಶಕ್ಕೆ ಕೊಡಲಿ ಪೆಟ್ಟು ಬೀಳುತ್ತದೆ. ದುಷ್ಟ ಆಲೋ-ಚನೆಗಳು ಬಂದಾಗ ಮನಸ್ಸನ್ನು ಹತೋಟಿಯಲ್ಲಿಟ್ಟು ವಿವೇಕತಂದುಕೊಂಡರೆ ಕಂಟಕಗಳನ್ನು ಹದ್ದಿಗೆತರಬಹುದು.

ವಿದ್ಯಾರ್ಥಿದೆಸೆಯಲ್ಲಿ ಹುಡುಗರಿಗೆ ಮೇಧಾಶಕ್ತಿ ಅಡಗಿರುತ್ತದೆ, ಇದನ್ನು ಸಚೇತನವನ್ನಾಗಿ ಮಾಡಲು ಯತ್ನಿಸಬೇಕು. ಜೀವವಿರುವವರೆಗೆ ಅವಿರತವಾಗಿ ಹೋರಾಡಿ ಕಾರ್ಯಸಾಧನೆಗೆ ಮುಂದಾಗಬೇಕು. ಸಾರ್ಥಕ ಬದುಕು ನಡೆಸಬೇಕೆಂಬುದು ನಿಮ್ಮ ಜೀವನದ ಹೆಗ್ಗುರಿಯಾಗಿರಲಿ. ಜೀವನದಲ್ಲಿ ಕಷ್ಟ, ಸುಖಗಳು ಬಾರದಿರುವುದಿಲ್ಲ. ಆಗ ಎದೆಗಾರಿಕೆಯಿಂದ ಅವುಗಳನ್ನು ನೀಗಿ ಕೊಳ್ಳಬೇಕು. ಇದಕ್ಕೆ ಚಿತ್ತಸ್ಥೈರ್ಯ, ಸತ್ಯನಿಷ್ಠೆಯಿಂದ ಸಾಧನೆ ಮಾಡಬೇಕು. ಅಚಲ ಯತ್ನದಿಂದ ಯಾವಕಾರ್ಯವೂ ಸಿದ್ಧಿಸುವುದು ! ಮನಸ್ಥೈರ್ಯದ ಅಗತ್ಯವಿದೆ ಇದಕ್ಕೆ.

# ಮಾನವೀಯ ಮೌಲ್ಯ ಶಿಕ್ಷಣ

ವಿಳಾಸ :- ಹೆಚ್. ಎಸ್. ನರಸಿಂಹಜೀಯರ್. ಮುಖ್ಯೋಪಾಧ್ಯಾಯರು, ಇಂಗ್ಲೀಷ್ ಪಾಠಶಾಲೆ
ತುಮಕೂರು.

ಶಿಕ್ಷಣ ಕ್ರಮದಲ್ಲಿ ನೀತಿ ಭೋಧನೆ ಅಥವಾ ಮಾನವೀಯ ಮೌಲ್ಯಗಳ ಬೋಧನೆ ಅವಶ್ಯಕವೇ? ಈ ವಿಚಾರವಿಲ್ಲಿ ಸಾಮಾನ್ಯ ಜನರ ಅಭಿಪ್ರಾಯ ವಿವಿಧ ರೀತಿಯಲ್ಲಿದ್ದರೂ ಹಿರಿಯ ವ್ಯಕ್ತಿಗಳ, ದಾರ್ಶನಿಕರ ಅಭಿಪ್ರಾಯವೇನಿದೆ ಎಂಬುದನ್ನು ನೋಡೋಣ.

ಜಾರ್ ರಸ್ಕಿನ್ ಮಹಾಶಯನು ಹೆಸರಾಂತ ಶಿಕ್ಷಣ ತಜ್ಞ ಹಾಗೂ ದಾರ್ಶನಿಕ ವ್ಯಕ್ತಿ. ಈತನು ಹೇಳುವ ಪ್ರಕಾರ 'All Education should be moral first and intellectual secondarily' ಎಂದು ತಿಳಿಸಿದ್ದಾನೆ. ಎಲ್ಲಾ ರೀತಿಯ ಶಿಕ್ಷಣದಲ್ಲಿಯೂ ಮಾನವೀಯ ಮೌಲ್ಯ ಅಥವಾ ನೀತಿ ಬೋಧನೆಗೆ ಮೊದಲನೆ ಸ್ಥಾನ ಹಾಗೂ ಇತರೆ ವಿಷಯಗಳಿಗೆ ಎರಡನೆಸ್ಥಾನ ವಿರಬೇಕೆಂಬುದೇ ಈತನ ಅಭಿಪ್ರಾಯ. ಆದರೆ ಈಗಿನ ಶಿಕ್ಷಣದಲ್ಲಿ ವಿಷಯ ಜ್ಞಾನಕ್ಕೆ ಮೊದಲನೆ ಸ್ಥಾನ, ನೀತಿ ಬೋಧನೆಗೆ ಎರಡನೆಯಸ್ಥಾನವೂ ಇಲ್ಲ. ಇದಕ್ಕೆ ಗಮನವೇ ಇಲ್ಲವೆಂದು ಹೇಳಿದರೂ ಅತಿಶಯೋಕ್ತಿ ಏನಲ್ಲ.

ಮತ್ತೊಬ್ಬ ಶಿಕ್ಷಣ ತಜ್ಞನಾದ ಹರ್ಬಾರ್ಟ್ ಎಂಬುದನ್ನು 'The one and the whole work of Education may be summed up in the concept of moralitry' ಎಂದಿದ್ದಾನೆ. ಇಡೀ ಶಿಕ್ಷಣದ ಉದ್ದೇಶ ಹಾಗೂ ಕಾರ್ಯ ಉತ್ತಮ ಶೀಲವುಳ್ಳ ನಾಗರೀಕರ ನಿರ್ಮಾಣವೆಂದು ಅಭಿಪ್ರಾಯ ಪಟ್ಟಿದ್ದಾನೆ.

ಶಿಕ್ಷಣ ಆಯೋಗದ ಅಧ್ಯಕ್ಷರಾಗಿದ್ದ ಹಾಗೂ ಹೆಸರಾದಂತ ಶಿಕ್ಷಣ ತಜ್ಞರಾದ ಕೋಠಾರಿಯ ವರು 'Education is incompiete without moral and spiritual Education' ಎಂದು ತಮ್ಮ ವರದಿಯಲ್ಲಿ ತಿಳಿಸಿರುತ್ತಾರೆ. ನೈತಿಕ ಶಿಕ್ಷಣ ಹಾಗೂ ಆಧ್ಯಾತ್ಮ ಶಿಕ್ಷಣವಿಲ್ಲದ ಶಿಕ್ಷಣವು ಅಪರಿಪೂರ್ಣವೆಂಬುದೇ ಇವರ ಅಭಿಮತ.

ಮಹಾತ್ಮಾ ಗಾಂಧೀಜಿಯವರು "ಸಪ್ತಮಹಾಪಾತಕ"ಗಳನ್ನು ವಿವರಿಸುತ್ತಾ ಯಾವ ಮಾನವನೂ ಏಳು ಕೆಟ್ಟ ಕೆಲಸಗಳನ್ನು ಮಾಡಬಾರದೆಂದು ಬೋಧಿಸಿದ್ದಾರೆ. ಅದರಲ್ಲಿ ಬಹು ಮುಖ್ಯವಾದದ್ದು "ಶೀಲವಿಲ್ಲದ ಶಿಕ್ಷಣ ಮಹಾಪಾಪ 'Education without Character is a great sin' ಎಂದಿದ್ದಾರೆ. ಆದರೂ ಅವರ ಅನುಯಾಯಿಗಳಿಂದ ರಚಿತವಾದ ಸ್ವಾತಂತ್ರ್ಯ ನಂತರ ಸರ್ಕಾರವು ಶಿಕ್ಷಣ ಕ್ರಮದಲ್ಲಿ



ಶೀಲದ ಬೆಳವಣಿಗೆಗೆ ಆದ್ಯತೆ ಕೊಡದೇ ಇದ್ದುದು ತುಂಬಾ ಶೋಚನೀಯ. ಈಗಿನ ಸಮಾಜದ ಬಹುಮುಖ್ಯ ಅನಿಷ್ಟಗಳಿಗೆ ಇದೇ ಒಂದು ಮುಖ್ಯ ಕಾರಣವಾಗಿರ ಬಹುದೆಂಬುದನ್ನು ನಾವು ಅಲ್ಲಗಳೆಯುವಂತೆಯೂ ಇಲ್ಲ.

ಸ್ವಾಮಿ ವಿವೇಕಾನಂದರು ನಮ್ಮ ದೇಶದ ಆಧ್ಯಾತ್ಮ ಜೀವನದ ಪ್ರಾಮುಖ್ಯತೆ ಯನ್ನು ಪಾಶ್ಚಾತ್ಯರಿಗೆ ಪರಿಚಯ ಮಾಡಿಕೊಟ್ಟ ಒಬ್ಬ ಸಾಹಸಿ ಯುವಕರು. ಇವರು ಶಿಕ್ಷಣ ಕ್ರಮದ ವಿಷಯದಲ್ಲಿ ನಾವು ಆಚರಿಸುತ್ತಿರುವ ಧರ್ಮದ ವಿಚಾರದಲ್ಲಿ ತಮ್ಮ ಅನಿಸಿಕೆಗಳನ್ನು ಮನಬಿಚ್ಚಿ ಹೇಳಿದ್ದಾರೆ. ಶಿಕ್ಷಣ ಕ್ರಮವು ಹೇಗಿರಬೇಕೆಂಬ ಬಗ್ಗೆ ಅವರ ಅಭಿಮತಈ ರೀತಿ ಇದೆ. "We want Education by which character is formed, strength of mind increosed, intellect expended and by which one can stand on one's own feat" ಶಿಕ್ಷಣದ ಮುಖ್ಯ ಉದ್ದೇಶಗಳನ್ನೆಲ್ಲಾ ಒಳಗೊಂಡಿರುವ ಇವರ ಅನುಭವವಾಣಿ ಸರ್ವಕಾಲಕ್ಕೂ ಸರ್ವಜನರಿಗೂ ಒಪ್ಪಿಗೆಯಾಗುವಂತಹದು. ಇವರ ಹೇಳಿಕೆಯಲ್ಲಿಯೂ ಉತ್ತಮ ವ್ಯಕ್ತಿತ್ವ ನಿರ್ಮಾಣಕ್ಕೇ ಮೊದಲನೆಯ ಆದ್ಯತೆ ಇದೆ.

ಆಂಧ್ರಪ್ರದೇಶದ ಪುಟ್ಟಪರ್ತಿಯಲ್ಲಿರುವ ಶ್ರೀ ಸತ್ಯಸಾಯಿ ವಿಶ್ವವಿದ್ಯಾನಿಲಯದ ಕುಲಪತಿಗಳಾದ ಶ್ರೀ ಸತ್ಯಸಾಯಿ ಬಾಬಾರವರು ನಮ್ಮ ಇಂದಿನ ಶಿಕ್ಷಣ ಕ್ರಮದ ಬಗ್ಗೆ ಅದು ಹೇಗಿರಬೇಕೆಂಬ ಬಗ್ಗೆ ಈ ರೀತಿ ತಮ್ಮ ಆಶೀರ್ವಚನದಲ್ಲಿ ತಿಳಿಸಿದ್ದಾರೆ.

The Education system is the Bank on which the nation draws a Cheque whenever it wants strong, reliable and skilled workers. If is goes bankrupt, as is has very nearly gone to-day, it is a national dis- aster. If the system is overhanled and lubricated, the next generation is assured of good leaders and followers. "

ಈ ದಿಸೆಯಲ್ಲಿ ಅವರು ಕಾರ್ಯಕ್ರಮವನ್ನು ರೂಪಿಸಿ ಅವರು ನಡೆಸುತ್ತಿರುವ ಎಲ್ಲಾ ಸಂಸ್ಥೆಗಳಲ್ಲಿಯೂ ಮಾನವೀಯ ಮೌಲ್ಯ ಶಿಕ್ಷಣಕ್ಕೆ ಮೊದಲ ಆದ್ಯತೆಕೊಟ್ಟು ಅವುಗಳ ಬೋಧನೆ ಹಾಗೂ ಮೌಲ್ಯಮಾಪನ ಮಾಡಿಸಿ ವಿದ್ಯಾರ್ಥಿಗಳು ಉತ್ತಮ ಪ್ರಜೆಗಳಾಗಿ ಬಾಳಲು ಮಾರ್ಗದರ್ಶನ ನೀಡುತ್ತಿದ್ದಾರೆ. ಮಾನವೀಯ ಮೌಲ್ಯಗಳ ಪರೀಕ್ಷೆಯಲ್ಲಿ ಫೇಲಾಗಿ ಇತರೆ ವಿಷಯಗಳಲ್ಲಿ ಪಾಸಾದ ವಿದ್ಯಾರ್ಥಿಗಳನ್ನು ಮುಂದಿನ

ತರಗತಿಗಳಿಗೆ ತೇರ್ಗಡೆಮಾಡುವುದಿಲ್ಲ. ಎರಡೂ ವಿಷಯಗಳಲ್ಲಿ ಅರ್ಹತೆ ಪಡೆದಿರುವವರು ಮಾತ್ರ ಮುಂದಿನ ತರಗತಿಗಳಿಗೆ ಹಾಕಲ್ಪಡುತ್ತಾರೆ. ಬಹುಶಃ ಇಡೀನಮ್ಮ ರಾಷ್ಟ್ರದದಲ್ಲಿ ಇಂತಹ ವ್ಯವಸ್ಥೆ ಇರುವುದು ಕೇವಲ ಈ ವಿಶ್ವವಿದ್ಯಾನಿಲಯದ ಸಂಸ್ಥೆಗಳಲ್ಲಿ ಮಾತ್ರವೇ ಎಂದು ಕಂಡು ಬರುತ್ತದೆ. ಇಂತಹ ತಳಹದಿಯನ್ನು ಬಾಬಾರವರ ಆದೇಶದಂತೆ ಅಲ್ಲಿಯ ಪ್ರಥಮ ಉಪಕುಲಪತಿಗಳಾಗಿದ್ದ ಶ್ರೀ ವಿ. ಕೆ. ಗೋಕಾಕ್‌ರವರು ರೂಪಿಸಿದ್ದರು. ಇಂದಿಗೂ ಇದೇರೀತಿ ವ್ಯವಸ್ಥಿತವಾಗಿ ಮೌಲ್ಯ ಶಿಕ್ಷಣ ನಡೆಯುತ್ತಿದೆ.

ಮೇಲ್ಕಂಡ ಎಲ್ಲಾ ಮಹಾನುಭವಿಗಳ, ಮಹಾತ್ಮರ ಹೇಳಿಕೆಗಳ ಶಿಕ್ಷಣ ಕ್ರಮದಲ್ಲಿ ಚಾರಿತ್ರ್ಯ ನಿರ್ಮಾಣಕ್ಕೆ ಆದ್ಯತೆ ಕೊಡಲೇಬೇಕೆಂಬುದು ಮನವರಿಕೆಯಾಗುತ್ತದೆ. ಇಂದಿನ ನಮ್ಮ ಶಿಕ್ಷಣ ಕ್ರಮದಲ್ಲಿ ಈ ಬಗ್ಗೆ ಸಾಕಷ್ಟು ಗಮನ ಕೊಟ್ಟಿಲ್ಲವೆಂಬುದೂ ಎಲ್ಲರಿಗೂ ತಿಳಿದ ವಿಷಯವಾಗಿದೆ. ಶೀಲಕ್ಕೆ, ಪ್ರಾಮುಖ್ಯತೆ ಇಲ್ಲದ ಇಂದಿನ ಕ್ರಮವನ್ನು ಇನ್ನು ಮುಂದಾದರೂ ಸರಿಯಾದ ರೀತಿಯಲ್ಲಿ ರೂಪಿಸಿ ಮುಂದಿನ ಪ್ರಜೆಗಳಾದರೂ ಮಾನವರಾಗಿ ಬಾಳಲು, ಇಂದಿನ ಚುನಾಯಿತ ಪ್ರತಿನಿಧಿಗಳು, ಸರ್ಕಾರ ಹಾಗೂ ಜನತೆ ಪ್ರಯತ್ನಿಸುವರೆಂದು ಆಶಿಸೋಣವೆ.

---

## ಮಾತು-ಬರವಣಿಗೆ

ಮಾತು ತುಂಡು ದೀಪ. ಬರವಣಿಗೆ ನಂದಾದೀಪ,
ಶಾಶ್ವತವಾಗಿ ಉಳಿಯತಕ್ಕದ್ದು. ಅದರಿಂದ ಅನೇಕ
ದೀಪಗಳು ಹತ್ತಿ ಬೆಳಕಾಗುತ್ತದೆ.

—ಹೆಚ್. ಎಂ. ಶಂಕರನಾರಾಯಣರಾವ್

---

## ಹಣ-ಧರ್ಮ

ನಮ್ಮ ನಮ್ಮ ಹಣವನ್ನು ಗುಪ್ತವಾಗಿಟ್ಟುಕೊಳ್ಳುವಂತೆ
ನಮ್ಮ ಧರ್ಮಕಾರ್ಯಗಳನ್ನು ಗುಪ್ತವಾಗಿಟ್ಟುಕೊಳ್ಳಬೇಕು. ಇದು ನಮ್ಮ ಆತ್ಮತೃಪ್ತಿಗಾಗಿ ಮಾಡುವ
ಕೆಲಸ. ಪ್ರಚಾರ ಪ್ರತಿಷ್ಠೆಗಳಿಗಾಗಿ ಮಾಡುವ ಕೆಲಸವಲ್ಲ.

—ಕೆ. ಟಿ. ಪಾಂಡುರಂಗಿ.



# ಅಣುಯುಗದ ಭಯಂಕರ ಕೊಲೆಗಾರ

ಬಿ. ಸುಬ್ರಾಯ ಅಡಿಗರು, ನಿವೃತ ಉಪಾಧ್ಯಾಯರು ಸಂಡೂರು, ಬಳ್ಳಾರಿ ಜಿಲ್ಲೆ.

ಅಣುಯುಗದ ಅತಿಭೀಕರ ಕೊಲೆಗಾರನಾರು? ನಿಮಗೆ ಈ ಪ್ರಶ್ನೆ ಕೇಳಿದರೆ ನೀ ಬೆಚ್ಚಿಬೀಳಬಹುದು. ಆದರೆ ಈ ಭಯಂಕರ ಕೊಲೆಗಾರ ನಮ್ಮ ನಿಮ್ಮ ದೇಹದೊಳಗೇ ಇದ್ದಾನೆಂದು ಹೇಳಿದರೆ ನೀವುಖಂಡಿತ ಹೌಹಾರುವಿರಿ. ಆದರೆ ಇದು ಸತ್ಯಸಂಗತಿ. ಸ್ಟ್ರಾಂಟಿಯಮ್ ೯0 ಎಂಬ ಈ ವಸ್ತು ಅಣುವಿಸ್ಫೋಟದಿಂದ ಹೊರ ಹೊಮ್ಮಿ ಅದೃಶ್ಯಕಣಗಳ ರೂಪದಲ್ಲಿ ವಾತಾವರಣದೊಳಗೆ ಸೇರಿ ಹೋಗುತ್ತದೆ. ಈ ಕಣಗಳು ನೆಲದಿಂದ ೭ ಮೈಲು ಎತ್ತರದ ವರೆಗೆ ತಲುಪುವುವು. ಮತ್ತೆ ಮೆಲ್ಲ ಮೆಲ್ಲನೆ ನೆಲಕ್ಕಿಳಿಯುವುವು. ಆ ಬಳಿಕ ಇವು ನೆಲದೊಳಗೆ ಸೇರಿಹೋಗುತ್ತವೆ. ಅಲ್ಲಿಂದ ಸ್ಟ್ರಾಂ-೯೦ ರ ಕಣಗಳು ಮರಗಿಡ ಹಾಗೂ ಪ್ರಾಣಿಗಳ ದೇಹವನ್ನು ಪ್ರವೇಶಿಸುತ್ತವೆ. ಮತ್ತೆ ಅಲ್ಲಿಂದ ಹೂ, ಹಣ್ಣು, ಹಾಲು— ಮೊದಲಾದ ರೂಪದಲ್ಲಿ ಮನುಷ್ಯರ ದೇಹವನ್ನು ಸೇರುತ್ತವೆ. ಎಂತಲೇ ಇಂದು ಪ್ರಪಂಚದ ಪ್ರತಿಯೊಬ್ಬನ ದೇಹದಲ್ಲೂ ಸ್ಟ್ರಾಂ-೯೦ ಇದೆ. ೧೯೪೫ರ ವರೆಗೆ ಯಾರೊಬ್ಬರ ದೇಹದಲ್ಲೂ ಈವಸ್ತು ಇರಲಿಲ್ಲ.

ಸ್ಟ್ರಾಂ-೯೦ ರಿಂದ ಎಲುಬಿನ ಕ್ಯಾನ್ಸರ್ ಹಾಗೂ ಲ್ಯುಕೋಮಿಯಾ ಎಂಬ ಭಯಂಕರ ಕಾಯಿಲೆಗಳುಂಟಾಗುತ್ತವೆ. ಈಗ ಒಬ್ಬನ ದೇಹದಲ್ಲಿ ಸ್ಟ್ರಾಂ-೯೦ ಇದೆಯೋ ಇಲ್ಲವೋ-ಎಂಬುದನ್ನು ಕಂಡುಹಿಡಿಯುವ ಬಗೆ ಹೇಗೆ?-ಎಂಬ ಪ್ರಶ್ನೆ ಸಹಜವಾಗಿಯೇ ಎದುರಾಗುತ್ತದೆ. ಏಕೆಂದರೆ ಸ್ಟ್ರಾಂ-೯೦ ರ ಚುಚ್ಚುವಿಕೆಯಿಂದಲೂ ಮಾನವ ಜೀವನ ಅಪಾಯಕ್ಕೆ ಗುರಿಯಾಗಬಲ್ಲುದು.

ಈ ವಿಷಯದಲ್ಲಿ ಕೊಲಂಬಿಯಾ ವಿಶ್ವವಿದ್ಯಾಲಯದ ಜಿಯೋಕೆಮಿಸ್ಟ್ರೀ ಪ್ರಯೋಗಶಾಲೆ ಅತಿ ಮಹತ್ವದ ಕೆಲಸ ಮಾಡಿದೆ. ಅಲ್ಲಿಯ ವಿಜ್ಞಾನಿ ಡಾ|| ಜಾನ್ ಲಾರೆನ್ಸ್ ಕುಲ್ಪ್ ನಡೆಸಿದ ಶೋಧಗಳ ಪರಿಣಾಮ ಸುಸ್ಪಷ್ಟ. ಅವುಗಳನ್ನಾಧರಿಸಿಯೇ ಈ ಗಂಡಾಂತರದ ಬಗ್ಗೆ ಆಧುನಿಕ ಸಮಾಜಕ್ಕೆ ಎಚ್ಚರಿಕೆ ನೀಡಲಾಗಿದೆ. ಇಲ್ಲದಿದ್ದರೆ ಮುಂದೊಂದು ದಿನ ಇಡೀ ಮಾನವ ಸಮಾಜವೇ ಈ ಭಯಂಕರ ವಸ್ತುವಿನ ಹಿಡಿತಕ್ಕೆ ಸಿಕ್ಕು ಪಾರಾಗದಂತಹ ಸ್ಥಿತಿ ಉಂಟಾಗಬಹುದು. ಡಾ. ಕುಲ್ಪ್ ತಮ್ಮ ಶೋಧಗಳಿಂದ ಕಂಡುಕೊಂಡ ಕೆಲ ಸಂಗತಿಗಳು ಇಂತಿವೆ:—

೧) ಈಗಿನ ಸ್ಟ್ರಾ-೯೦ ರಿಂದ ಮಕ್ಕಳಿಗೆ ಅಷ್ಟೇನೂ ಹಾನಿಯಿಲ್ಲ. ಆದರೆ ಅಮೇರಿಕೆಯಲ್ಲಿ ಮಾತ್ರ ಸ್ಟ್ರಾಂ-೯೦ ಹಿರಿಯರಿಗಿಂತ ೧೧ ಪಟ್ಟು ಹೆಚ್ಚಾಗಿ ಮಕ್ಕಳದೇಹದಲ್ಲೇ ಸೇರಿಕೊಂಡಿದೆ.

೨) ೨೧೦೦ನೇ ಇಸ್ವಿಯವರೆಗೆ ಅಣುವಿಸ್ಫೋಟಕಗಳು ನಡೆಯುತ್ತಲೇ ಇದ್ದರೂ, ನಮ್ಮ ದೇಹದಲ್ಲಿ ಸ್ಟ್ರಾಂ-೯೦ ಪ್ರಮಾಣ ಅಪಾಯಕರಮಟ್ಟದ ೨೦% ರಷ್ಟು ಮಾತ್ರ ಇದ್ದೀತು.

೩) ಆದರೆ ವಿಶ್ವದಲ್ಲಿ ಅಣುಯುದ್ಧಗಳೇನಾದರೂ ಆರಂಭವಾದರೆ ಸ್ಟ್ರಾಂ-೯೦ ರ ಪ್ರಮಾಣ ಮಿತಿ ಮೀರಿ ಹೆಚ್ಚಿ ಪ್ರತಿಯೊಬ್ಬನ ಜೀವನಕ್ಕೂ ಗಂಡಾಂತರ ಒದಗ ಬಹುದು.

ಈ ರೀತಿ ಸ್ಟ್ರಾಂ-೯೦ ಮಾನವಸಮಾಜದ ಅತಿ ಭಯಂಕರ ಶತ್ರು. ಸ್ಟ್ರಾಂ-೯೦ ರ ಜೀವನ ಬರೀ ೨೮ ವರ್ಷ. ಅಂದರೆ ಇದರ ರೇಡಿಯೋಧರ್ಮಿತ್ವ ಕೊನೆಗೊಳ್ಳಲು ೨೮ ವರ್ಷ ತಗಲುವುದು. ಸ್ಟ್ರಾಂ-೯೦ ಕ್ಯಾಲ್ಸಿಯಮ್‌ದಂತೆಯೇ ನೇರವಾಗಿ ರಕ್ತ-ವನ್ನು ಸೇರುವುದು. ಆದರೆ ಕ್ಯಾಲ್ಸಿಯಮ್ ಎಲುಬುಗಳನ್ನು ನಿರ್ಮಿಸುವುದಾದರೆ. ಇದು ದುರ್ಬಲಗೊಳಿಸುವುದು.

ಒಂದು ಜಲಜನಕ ಬಾಂಬು ವಿಸ್ಫೋಟಗೊಂಡಾಗ ವಾತಾವರಣವನ್ನು ಸೇರುವ ತತ್ವಗಳಲ್ಲಿ ಸ್ಟ್ರಾಂ-೯೦ ಕೂಡ ಒಂದು. ಈ ತತ್ವಗಳು ಭೂಮಿಗೆ ಸೇರಲು ೧೦ ವರ್ಷ ತಗಲುವುದು. ಇವುಗಳ ಜತೆ ಸ್ಟ್ರಾಂ-೯೦ ಸಹ ನೆಲದೊಳಗೆ ಸೇರು-ವುದು. ಆ ಬಳಿಕ ಇದು ಆಹಾರ ವಸ್ತುಗಳೊಂದಿಗೆ ಸೇರಿ ಮನುಷ್ಯದೇಹವನ್ನು ಪ್ರವೇಶಿಸುವುದು. ಹಾಲು ಸ್ಟ್ರಾಂ-೯೦ ರ ಪ್ರಮುಖ ಸಾಧನವೆಂದು ಡಾ||ಕುಲ್ಪ್ ಹೇಳಿಕೆ. ನೆಲದಲ್ಲಿ ಕ್ಯಾಲ್ಸಿಯಮ್ ಅತಿ ಹೆಚ್ಚು ಪ್ರಮಾಣದಲ್ಲಿ ಸಿಗುವಂತೆ ಮಾಡಿ-ದರೆ ಸ್ಟ್ರಾ-೯೦ರ ಪ್ರಭಾವ ತಗ್ಗಬಹುದು.

ಸ್ಟ್ರಾಂ-೯೦ ರಿಂದಲೇ ಎಲುಬಿನ ಕ್ಯಾನ್ಸರ್ ಹಾಗೂ ರಕ್ತದ ಕ್ಯಾನ್ಸರ್ ಉಂಟಾಗುವುದೆಂದು ವಿಜ್ಞಾನಿಗಳ ಅಭಿಪ್ರಾಯ ಮುಂದಿನ ಜನಾಂಗಗಳಿಗೆ ಸಂಕಟ ತಂದೊಡ್ಡಬಹುದು.

ವಿಶ್ವದ ವಿಜ್ಞಾನಿಗಳು ಸ್ಟ್ರಾಂ-೯೦ರ ದುಷ್ಪರಿಣಾಮದ ಬಗ್ಗೆ ಚಿಂತಿತರಾಗಿದ್ದಾರೆ. ಅಣುವಿಸ್ಫೋಟ ನಿಂತರೆ ಈ ಸಮಸ್ಯೆ ಸಹಜವಾಗಿಯೇ ಬಗೆಹರಿಯುವುದು. ಆದರೆ ಮಹತ್ವಾಕಾಂಕ್ಷಿ ರಾಷ್ಟ್ರಗಳು ಇದಕ್ಕೊಪ್ಪಲಾರವು ಆದ್ದರಿಂದ ಈ ಭಯಂಕರ ಶತ್ರುವನ್ನು ಹತೋಟಿಯಲ್ಲಿಡಲು ಏರಾವಕ್ರಮ ಕೈಗೊಳ್ಳುವರೋ ಕಾದು ನೋಡಬೇಕು. (ಸಂಗ್ರಹ.)

## ಕನಸಿನ ಕನ್ಯೆ ವೈಜ್ಞಾನಿಕ ಕಿರುಧಾರಾವಾಹಿ-7

ಪ. ರಾಮಕೃಷ್ಣ ಶಾಸ್ತ್ರಿ, "ಶಿವಶಕ್ತಿ ನಿಲಯ," ಮಚ್ಚಿನ, ದಕ್ಷಿಣ ಕನ್ನಡ ಜಿಲ್ಲೆ.

ಜಯಜಯಕಾರದೊಡನೆ ರಾಣಿ ಉಮಾಳ ಪಟ್ಟಾಭಿಷೇಕವೂ ನಡೆದಿತ್ತು. ಸೈನಿಕರ ಮುಜುರೆಯನ್ನು ಪಡೆದಾಗಿತ್ತು. ಪ್ರಜರ ಕಾಣಿಕೆಯಿಂದ ಭಂಡಾರ ತುಂಬಿತ್ತು. ಏನೊ ಒಂದೆರಡು ನಿತ್ಯದ ಕೊರತೆಗಳುಳಿದರೆ ಮತ್ತೆಲ್ಲವೂ ಸರಾಗವಾಗಿ ವೈಭವ ಪೂರ್ಣವಾಗಿ ಆ ಉತ್ಸವ ನಡೆದಿತ್ತು ಅದರಿಂದ ಉತ್ಸಹಗೊಂಡಿದ್ದಳು ಉಮೆ. ಪ್ರಜರಿಗೆ ನಾಲ್ಕು ಮಾತುಗಳನ್ನು ಹೃದಯ ಪೂರ್ವಕವಾಗಿ ನುಡಿದು, "ನನ್ನ ಕರ್ತವ್ಯದ ಹೊಣೆಯಾತೆಯೇ ಪ್ರಜರಾದ ನಿಮ್ಮದೂ ಇದೆ; ಪ್ರಜರು ಸಂತೋಷದ-ದಲ್ಲಿದ್ದರೆ ರಾಜನೇ ಹೊರತ್ತು ಇಲ್ಲವಾದರೆ ಅವನೊಬ್ಬ ರಾಜನಾಗಲಾರ" ಎಂದಾಗ ಪ್ರಜಾಸಮೂಹದಿಂದ ಹರ್ಷಧ್ವನಿ ಹೊರಟತ್ತು. ರಾಣಿಯ ಜಯಜಯಕಾರದಿಂದ ದಿಗ್ದಿಗಂತ ಮೊಳಗಿತ್ತು. ಕತ್ತಿಗಳ ಖಣ ಖಣಿಲಾಟ ಕೇಳಿ ಬಂದಿತ್ತು.

ಮಂತ್ರಿ ದಂಡನಾಯಕರಿಗೆ ರಾಣಿಯೆಂದರೆ ಕೇವಲ ಸ್ತ್ರೀಯಲ್ಲ, ವೀರತೆಯೇ ಮೂರ್ತಿವೆತ್ತಿದ್ದಾಳೆ ಎಂದು ತೋರಿತು. ಅವರೂ ರಾಣಿಯ ಮಾತಿಗೆ ತುಂಬ ಮೆಚ್ಚಿದರು

ಅಂದು ಸಂತಸದಿಂದ ಸಭೆ ಬರಖಾಸ್ತು ಆದ ಮೇಲೆ ರಾಣಿ ತನ್ನ ಅಂತಃಪುರಕ್ಕೆ ಬಂದು ಪಲ್ಲಂಗದ ಮೇಲೆ ಮಲಗಿ ಬಹುಹೊತ್ತು ಯೋಚಿಸಿದಳು. ತನ್ನ ಕನಸನ್ನು ಯಾವ ಬಗೆಯಾಗಿ ಹೊರಗೆಡಹಿ ಕಾರ್ಯರೂಪಕ್ಕೆ ತರಲಿ, ಅಂಥ ಕನಸು ನನಸಾಗ-ದಿದ್ದರೆ ತಾನು ಬದುಕುಳಿಯುವುದಾದರೂ ಏಕೆ ? ಇಷ್ಟು ಅನುಕೂಲತೆಗಳಿದ್ದು ಕ್ಷುಲ್ಲಕ ಆಸೆಯೊಂದನ್ನು ಕಾರ್ಯಗತವಾಗಿ ಮಾಡಿ ತೋರಿಸದಿದ್ದರೆ ತನ್ನ ಬದುಕಾದರೂ ಏಕೆ? ಇಂಥ ಯೋಚನೆಗಳಲ್ಲಿ ಆಕೆ ದಿನಗಳನ್ನು ಕಳೆದಳು. ತಿಂಗಳುಗಳನ್ನು ಕಳೆದಳು. ತನ್ನ ಆಸೆಯನ್ನು ಪ್ರಚುರ ಪಡಿಸುವ ಕಾಲವಿನ್ನೂ ಪಕ್ವವಾಗಿಲ್ಲವೆಂದು ಒಂದ ತರದ ಮೂಕತೆಯಲ್ಲಿ ಎಲ್ಲವನ್ನು ನುಂಗಿಕೊಂಡು. ಕಳೆದಳು.

ಹಾಗೆ ಇರಲು ಅರಮನೆಗೊಬ್ಬ ಪವಾಡ ಪಂಡಿತ ಬಂದ. ಅವನು ತನ್ನ ಔಷಧ ಪ್ರಭಾವದಿಂದ ಮಾಡಲಿರುವ ಅನೇಕ ಪ್ರತಾಪಗಳನ್ನು ಹೇಳ ಅಂಥ ದೃಶ್ಯವನ್ನು ತೋರಿಸಿ ಏನಾದರೂ ಸಂಭಾವನೆ ಪಡೆಯಲು ಬಂದಿರುವುದಾಗಿ ಅದಕ್ಕೆ ಅವಕಾಶ ನೀಡಬೇಕಾಗಿ ರಾಣಿಯಲ್ಲಿ ಬಿನ್ನಹ ಮಾಡಿಕೊಂಡ.

ಅವನ ಮಾತಿನಿಂದ ರಾಣಿಗೆ ಯಾವುದೊ ದಿಕ್ಕಿನಿಂದ ಝಗ್ಗನೆ ಪ್ರಜ್ವಲಿಸುವ ಪ್ರಭಾಮಂಡಲವೊಂದು ಗೋಚರಿಸಿದಂತಾಯಿತು. ಆಕೆ ಪಂಡಿತನಿಗೆ, "ನಿಮ್ಮ ಯಾವ ನೂತನ ವಿದ್ಯೆಯಿದೆಯೊ ಅದನ್ನು ನಾವು ಕಾಣುವಂತಾಗಲಿ. ನಮ್ಮ ಪ್ರಜರೂ ನೋಡಿ ಸಂತೋಷಿಸಲಿ" ಎಂದು ಅಪ್ಪಣೆ ಕೊಟ್ಟಳು.



ಮಾರನೆಯ ದಿನ ಪಂಡಿತ ತನ್ನ ಪೆಟ್ಟಿಗೆ ಹಿಡಿದುಕೊಂಡು ಸಿದ್ಧನಾಗಿ, ತುಂಬಿದ ಓಲಗಕ್ಕೆ ಬಂದು ಹಾಜರಾದ. ಮಹಾರಾಣಿ ಬರುವ ವಾರ್ತೆಯನ್ನು ವಂದಿ ಮಾಗಧರು ಬಿತ್ತರಿಸುತ್ತಿದ್ದಂತೆ ಕೊಂಬು ಕಹಳೆಯ ನಾದದೊಂದಿಗೆ, ರಾಣಿ ಸಿಂಹಾಸನವೇರಿ ಕುಳಿತಾಗ ನಾಲ್ದಿಕ್ಕೂ ಮೊಳಗುವಂತೆ ಜಯ ಜಯಕಾರ ಕೇಳಿಸಿತ್ತು. ರಾಣಿ ಹಸನ್ಮುಖಳಾಗಿ ಮಂತ್ರಿಯಡೆ ನೋಡಿದಳು. ಮಂತ್ರಿ ಪಂಡಿತನ ಮೊಗ ನೋಡಿ ಕಣ್ಸನ್ನೆ ಮಾಡಿದ. ಪಂಡಿತ ಎದ್ದು ನಿಂತ. ರಾಣಿಯಡೆಗೆ ಬಂದು ವಂದಿಸಿ. ತುಂಬಿದ ಜನಸ್ತೋಮವನ್ನು ನೋಡಿ ವಿನಯವಾಗಿ ಬಾಗಿ, "ನಾನೀಗ ಮಾಡಿ ತೋರಿಸುತ್ತಿರುವ ಪ್ರತಿಯೊಂದು ಕಾರ್ಯವೂ ಔಷಧ ಪ್ರಭಾವದಿಂದ ಆಗುವಂಥದು. 'ಜಾದೂ'ಅಲ್ಲ, ಐಂದ್ರಜಾಲಿಕವಲ್ಲ, ಮೋಸ, ವಂಚನೆಗಳಿಲ್ಲ, ಇದು ವಿಜ್ಞಾನದಿಂದ ಪ್ರಭಾವಿತವಾದುದು. ನಮ್ಮ ಪೂರ್ವಜರಿಂದ ಮುಖೋದ್ಗತವಾಗಿ ಬಂದ ಇದನ್ನು ನಾನು ನನ್ನ ಉಪಜೀವನಕ್ಕಾಗಿ, ಹಲವಾರು ದೃಶ್ಯರೂಪದಿಂದ ತೋರಿಸಿ, ಮೆಚ್ಚಿಕೆ ಪಡೆದುಕೊಳ್ಳುತ್ತೇನೆ. ಇದರಿಂದ ಅಪಾಯ ಒಂದಿಷ್ಟು ಇಲ್ಲ. ವಿಜ್ಞಾನದಲ್ಲೆ ಅಸ್ತ್ರ ಪ್ರತ್ಯಸ್ತ್ರಗಳಿವೆ. ಅದನ್ನು ನಾನು ಚೆನ್ನಾಗಿ ಅಭ್ಯಾಸ ಮಾಡಿದ್ದೇನೆಂದರೆ ನನ್ನದು ದಾರ್ಷ್ಟ್ಯದ ಮಾತಲ್ಲ" ಎಂದು ಹೇಳಿ ಸೀಸೆಯೊಂದನ್ನು ತೆಗೆದು ಕುಲುಕಿಸಿ ಒಂದು ಪಾತ್ರೆಗೆ ಎರೆದ. ಇನ್ನೊಂದು ಸೀಸೆಯಿಂದ ಅದೇ ಪಾತ್ರೆಗೆ ಒಂದಿಷ್ಟು ದ್ರಾವಕ ಎರೆದು ಬಟ್ಟೆಯ ಚೂರೊಂದನ್ನು ಮುಚ್ಚಿ, "ಓ, ವಿಜ್ಞಾನಿಯೆ ನಿನಗೆ ನನ್ನ ನಮನಗಳು" ಎಂದು ಹೇಳಿ ಒಂದಿಷ್ಟು ಹಿಂದೆ ಸರಿದುನಿಂತ.

ಆಗ ಭೂಮಿಯೇ ಬಿರಿದಂಥ ಮಹಾಸ್ಫೋಟವೊಂದು ಕೇಳಿಬಂತು. ಭೂವ್ಯಾಕಾಶವನ್ನೂ ಆವರಿಸಿ ನಿಂತಿತು ಧೂಮಮಾಲೆ. ಎಲ್ಲಿಯೂ ಏನೇನೂ ಕಾಣಿಸದು. ಕತ್ತಲೋ ಕತ್ತಲು. ಜನರೆಲ್ಲ ಆಮಹಾಶಬ್ದದಿಂದ ಬೆದರಿ ಹಾಹಾಕಾರ ಮಾಡ ತೊಡಗಿದರು. ಹೊಗೆಯಿಂದ ಉಸಿರು ಕಟ್ಟುವಂತಾಗ ತೊಡಗಿತ್ತು. ಅದನ್ನು ಕಂಡು ಪಂಡಿತ ಕೂಡಲೇ ಹೊಗೆಯನ್ನು ನಿವಾರಿಸಿದ. ಬೆಕ್ಕೊಂದನ್ನು ಹಿಡಿದು ತರುವಂತೆ ಹೇಳಿದ. ಹಾಗೆ ಹಿಡಿದು ತಂದ ಬೆಕ್ಕಿಗೆ ಎಂಥದೊ ಮಾತ್ರೆಯೊಂದನ್ನು ತಿನ್ನಿಸಿದ. ಕ್ಷಣದೊಳಗೆ ಅದು ಘನೀ ಭೂತವಾಗಿ ಬೆಳೆಯ ತೊಡಗಿತು. ಮುಂಗಾಲನ್ನೆತ್ತಿ ವಿಕಾರವಾಗಿ ಗರ್ಜಿಸಿ ತನ್ನ ವಿಕಾರ ಹಲ್ಲುಗಳನ್ನು ತೋರಿಸಿ ತಾನೀಗ ಪ್ರಚಂಡ ಹುಲಿರಾಯ ಎಂಬುದನ್ನು ಸಭೆಗೆ ಮನನ ಮಾಡಿಕೊಟ್ಟಿತು. ಅದರಿಂದ ಭೀತಿಗೊಂಡು ಆ ವ್ಯಾಘ್ರ ರೂಪಿಯನ್ನು ನೋಡುತ್ತ ಜನದಾ ಗುಂಪು ನತ್ತರಿಸಿತು. ಹಾಗೆಯೇ ನವಿಲನ್ನು ತರಿಸಿ ಕಾಗೆಯಾಗಿ ಮಾಡಿದ. ಗಿಳಿಯನ್ನು ಹದ್ದಾಗಿ ಮಾಡಿದ ಕೊನೆಗೆ ಎಲ್ಲವನ್ನು ಮೊದಲಿನ ರೂಪಕ್ಕೇ ತಂದ. ಕಬ್ಬಿಣದ ಸಂಕಲೆಯನ್ನು ಕೈಯಿಂದ ಕಟ ಕಟನೆ ಕಡಿದಿಕ್ಕಿದ. ಕಲ್ಲನ್ನು ಬೆರಳಿನಿಂದ ಹೊಡೆದು ಮರಳಾಗಿಸಿದ. ಮರಳನ್ನು

ಕಲ್ಲಾಗಿಸಿದ. ಬೆರಳನ್ನು ನೋವಾಗದಂತೆ ತುಂಡರಿಸಿ ಪುನಃ ಮೊದಲಿನ ಹಾಗೆಯೇ ಮಾಡಿದ.

ಇಷ್ಟೆಲ್ಲ ಆದ ಮೇಲೆ ಪಂಡಿತ "ನನ್ನ ಕೊನೆಯ ಪ್ರಯೋಗ ಮನುಷ್ಯನ ಮೇಲೆ ನಡೆಯುತ್ತದೆ. ದಯವಿಟ್ಟು ಯಾರಾದರೊಬ್ಬರು ಮುಂದೆ ಬನ್ನಿ" ಎಂದ.

ಯಾರೊ ಒಬ್ಬ ಪಂಡಿತನೆದುರು ಬಂದುನಿಂತ. ಅವನನ್ನು ನೋಡಿ ಪಂಡಿತ; ಅವನಿಗೊಂದು ದ್ರಾವಕ ಕುಡಿಯಲು ಕೊಟ್ಟ ನೆಲದ ಮೇಲೆ ಕುಳ್ಳಿರಲು ಹೇಳಿದ.

ಆ ಮನುಷ್ಯ ಕುಳಿತು ಕ್ಷಣ ಸರಿದಿರಲಿಲ್ಲ. ಅವನ ಅಂಗಾಂಗಗಳು ದಪ್ಪವಾಗ ತೊಡಗಿದವು. ಮುಖ ವಿಕಾರವಾಗ ತೊಡಗಿತು. ಹಲ್ಲುಗಳು ಉದ್ದವಾಗಿ ಬೆಳೆದು ಕೋರೆದಾಡೆಗಳಂತೆ ತೋರ ಹತ್ತಿದವು. ತುಟಿ ಜೋತಾಡಲಾರಂಭಿಸಿತು. ಮೊರ-ದಷ್ಟಗಲ ಕಿವಿಯಾಯಿತು. ತಲೆಗೂದಲು ಸುಕ್ಕುಗಟ್ಟಿ ಕುರುಚಲಾಯಿತು. ಪೊದೆ-ಪೊದೆಯಾಗಿ ಗಡ್ಡ ಬಂತು. ಮೈಯಲ್ಲಿ ದಟ್ಟವಾದ ರೋಮಗಳು ಬೆಳೆದವು ಇಂಥ ವಿಚಿತ್ರವನ್ನು ಕಂಡು ಸಭೆಗೆ ಸಭೆಯೇ ಬೆಚ್ಚಿ ಕಚ್ಚಿತು. ರಾಣಿ ಕುಳಿತಲ್ಲಿಯೇ ಹಿಂದಕ್ಕೊರಗಿ ಮಂದಹಾಸ ಬೀರಿದಳು.

ಆ ಮನುಷ್ಯ ಇದ್ದಕ್ಕಿದ್ದತೆಯೇ ಅರ್ಭಟಿಸಿ, ತನ್ನ ತೋಳನ್ನೆತ್ತಿ ಬೀಸಿ ಎದ್ದು ನಿಂತು, ಕೆಂಗಣ್ಣಿನಿಂದ ಸುತ್ತಲು ನೋಡಿದ. ಭೀತಿ ಬರಿಸುವ ಆ ನೋಟದಿಂದ ಜನರೆಲ್ಲ ಹೆದರಿ ಒಬ್ಬರಿಗೊಬ್ಬರು ಅಂಟಿ ಕುಳಿತರು. ಔಷಧಿ ಪ್ರಭಾವಿತ ಮಾನವ ಎದ್ದುನಿಂತ, ನಾಲ್ಕು ಹೆಜ್ಜೆ ಅತ್ತಿತ್ತ ನಡೆದು ಕೈಗೆ ಸಿಕ್ಕಿದ ಮನುಷ್ಯನನ್ನು ಲೀಲಾಜಾಲವಾಗಿ ಎತ್ತಿ ಮೇಲೆ ಬಿಸುಟ. ಆಗ ಪಂಡಿತ ಧಾವಿಸಿ ಬಿಸುಟ ಮನುಷ್ಯನನ್ನು ಆಧರಿಸಿ ಹಿಡಿದು ಎಂಥದೊ ಚೂರ್ಣವನ್ನು ವಿಕಾರ ಮನುಷ್ಯನ ಮೂಗಿಗೆ ಹಿಡಿದ ಕೂಡಲೇ ಆ ದೈತ್ಯರಾಯ ಬವಳಿ ಬಂದಂತೆ ನೆಲಕ್ಕೊರಗಿದ.

ಒಂದು ಕ್ಷಣದಲ್ಲಿ ಆ ಮನುಷ್ಯ ಮೊದಲಿನಂತೆಯೇ ಆಗಿ ತನ್ನ ಸ್ವಸ್ಥಾನಕ್ಕೆ ತೆರಳಿದ. ಪ್ರಯೋಗಾಂತವನ್ನು ವಿನಯವಾಗಿ ತಿಳಿಸಿ ಬಾಗಿ ನಿಂತ.

ರಾಣಿ ಉಮೆ ಅವನ ಔಷಧ ಪ್ರಭಾವಕ್ಕೆ ಮಾರುಹೋದಳು. ತನ್ನ ಕೈಯಿಂದಲೇ ಅವನಿಗೆ ಅನೇಕ ಸಂಭಾವನೆ ಕೊಟ್ಟು ತೃಪ್ತಿಪಡಿಸಿ, ಮಂತ್ರಿಯೊಡನೆ ಆ ಪಂಡಿತನನ್ನು ಚೆನ್ನಾಗಿ ನೋಡಿಕೊಂಡಿರುವಂತೆ ಹೇಳಿ ಸಭಾವಿಸರ್ಜನೆ ಮಾಡಿ ತನ್ನ ಅಂತಃಪುರಕ್ಕೆ ಹೊರಟು ಹೋದಳು.



ಅಂತಃಪುರದಲ್ಲಿ ರಾಣಿ ಅಂದಿನ ದೃಶ್ಯವನ್ನೇ ಕಲ್ಪಿಸುತ್ತ ಬಹುಹೊತ್ತು ಕುಳಿತಳು. ಅಂದಾಕೆಗೆ ಮನಸ್ಸು ತೃಪ್ತವಾಗಿತ್ತು. ತನ್ನ ಕನಸು ಸುಳ್ಳಲ್ಲ ಎಂದು ತೋರತೊಡಗಿತ್ತು. ಆದಿಂದು ವಾಸ್ತವ ಪ್ರಪಂಚದಲ್ಲಿ ಸತ್ಯದ ಹೂವಾಗಿ ಮೆರೆಯು-ತ್ತಿದೆ. ಅದಕ್ಕೀಗ ಕಾಲ ಸನ್ನಿಹಿತವಾಗಿದೆಯೆಂದು ಸಂತೋಷಿಸಿದಳು. ಹಾಗೆಯೆ ಹೊರಗೆ ಬಂದು ಗವಾಕ್ಷದಲ್ಲಿನಿಂತು ಕೆಳಗೊಮ್ಮೆ ನೋಡಿದಳು. ಕೋಟೆಯ ಬಾಗಿಲಲ್ಲಿ ಭಟನೊಬ್ಬ ಬಿಚ್ಚುಗತ್ತಿಯಿಂದ ಪಹರೆ ಮಾಡುತ್ತಿದ್ದ. ಬತೇರಿಯಿಂದ ಸಂಜೆಯ ಕಹಳೆ ಕೇಳಿ ಬರುತಿತ್ತು. ದೇವಸ್ಥಾನದಿಂದ ನಗಾರಿಯ ಸದ್ದು ಗಂಟೆಯ ಟಿಂಟಿಣಿ ನಾದವೂ ಕೇಳಿಬರುತ್ತಿತ್ತು. ಬೀದಿಯಲ್ಲಿ ಅತ್ತಿತ್ತ ಜನಸಂಚಾರ ನಡೆದೇ ಇತ್ತು. ಆದನ್ನೆಲ್ಲ ನೋಡಿ ಉಮಾ ತನ್ನ ದಾಸಿಯನ್ನು ಕರೆದು, "ಈಗಲೇ ಆ ಪಂಡಿತರನ್ನು ಇತ್ತ ಕರೆದು ಕೊಂಡುಬಾ" ಎಂದು ಆಜ್ಞಾಪಿಸಿದಳು. ದಾಸಿ ಅಲ್ಲಿಂದ ವೇಗವಾಗಿ ಹೋದಂತೆ ರಾಣಿ ಅಂತಃಪುರಕ್ಕೆ ನಡೆದು ತನ್ನ ಪಲ್ಲಂಗದ ಮೇಲ್ಗೆ ಕುಳಿತು ಪಂಡಿತನ ದಾರಿ ಕಾಯತೊಡಗಿದಳು.

ಪಂಡಿತ ಬಂದು ವಿನಯವಾಗಿ ತಲೆಬಾಗಿ, "ಏನಪ್ಪಣೆ"? ಎಂದು ಕೇಳಿದ.

ರಾಣಿ ಮಾತಿಗೆ ಮುನ್ನುಡಿಯೊ ಎಂಬಂತೆ, "ನಿಮ್ಮ ಪ್ರಯೋಗಗಳು ನಮ್ಮ ಮನಸ್ಸಿಗೆ ಚೆನ್ನಾಗಿ ನಾಟಿದುವು. ಅದರಿಂದಾಗಿ ನಿಮ್ಮ ಕೀರ್ತಿಯು ನಮ್ಮ ರಾಜ್ಯದಲ್ಲಿ ಶಾಶ್ವತವಾಗಿ ನಿಲ್ಲುವಂತೆ ಯತ್ನಿಸುವುದು ನ್ಯಾಯವಲ್ಲವೆ ಪಂಡಿತರೆ?" ಎಂದು ಕೇಳಿದಳು. ಪಂಡಿತ, "ಮಹಾರಾಣಿಯವರು ತೃಪ್ತರಾದುದು ನಮ್ಮ ಪುಣ್ಯ ವಿಶೇಷ. ಕೀರ್ತಿಯಾರಿಗಾ ಬೇಕಾದುದೇ. ಅಂಥ ಕೃಪೆ ತೋರಿದರೆ ನಾನು ಕೃತಜ್ಞ" ಎಂದ.

"ನಿಮ್ಮದೂ ಅದಕ್ಕೆ ಸಹಾಯಬೇಕು ಪಂಡಿತರೇ - ನೀವು ಒಂದಿಷ್ಟು ಪ್ರಯತ್ನಿಸಿದರೆ ಅದು ಆಗಿಯೇ ಆಗುವುದು" ಎಂದಳು ರಾಣಿ. ಪಂಡಿತ ನತಮಸ್ತಕನಾಗಿ, "ಏನೆಂದು ಅಪ್ಪಣೆಯಾಗಲಿ" ಎಂದು ಹೇಳಿದ.

"ನೀವು ಆಗ ಮನುಷ್ಯನನ್ನು ವಿಕಾರ ರೂಪಿಯಾಗಿ ಪರಿವರ್ತಿಸಿದಿರಿ. ಆ ಮನುಷ್ಯನ ಕ್ರೂರತನವನ್ನೇನೂ ಸರಿಯಾಗಿ ಪ್ರದರ್ಶಿಸಲು ಬಿಡಲಿಲ್ಲ, ಆದರೂ ಆತ ತನ್ನ ಭಯಾನಕ ರೂಪದಷ್ಟೆ ಕಾರ್ಯಮಾಡಲು ಹಿಂಜರಿಯಲಾರನೆಂದು ನಾವು ನಂಬುತ್ತೇವೆ. ಹಾಗೆಯೇ ಅಂಥ ಕ್ರೂರ ವ್ಯಕ್ತಿಗಳನ್ನು ಶಾಶ್ವತವಾಗಿ ಸೃಷ್ಟಿಸಲು ಆದೀತೇ?" ಎಂದು ಮನದೊಳಗಿನ ವಿಷಯವನ್ನು ಮುಂದೆ ಮಾಡಿದಳು ರಾಣಿ.

"ನನ್ನದು ಕೇವಲ ಔಷಧ ಪ್ರಭಾವ ಅದು ಶಾಶ್ವತವಾಗಿ ಉಳಿಯಲೂ ಬಹುದು; ಉಳಿಯದಿರಲೂಬಹುದು. ಅದನ್ನು ನಿರ್ದಿಷ್ಟವಾಗಿ ನನಗೆ ಹೇಳಲು ಬರುವಂತಿಲ್ಲ ಆದರೂ ಔಷಧಿ ಪ್ರಯೋಗದಿಂದ ಮಾನವನನ್ನು ಕ್ರೂರವಾಗಿ ಮಾಡಬ-ಹುದು; ರಾಕ್ಷಸನನ್ನಾಗಿ ಮಾಡಬಹುದೆಂದು ಹೇಳಬಲ್ಲೆ" ಎಂದ ಪಂಡಿತ.

"ಮನುಷ್ಯ ಯಾವಾಗಲೂ ಕ್ರೂರನಾಗಿಯೇ ಇರಬೇಕು. ಅವನು ಹಿಂಸ್ರ ಪಶುವಿನಂತಿರಬೇಕು. ನಮ್ಮ ಕೈಯ ಮಾರಕ ಶಸ್ತ್ರದಂತಿರಬೇಕು. ಅಂಥವನನ್ನು ನೀವು ಸೃಷ್ಟಿಸುತ್ತೀರಾ ?"

"ಔಷಧಿ ಪ್ರಯೋಗದಿಂದ ಅದನ್ನೂ ಮಾಡಬಲ್ಲೆ ಮಹಾರಾಣಿ ಆದರೆ ಗರ್ಭಸ್ಥ ಶಿಶುವಿಗೆ ಔಷಧ ಪ್ರಯೋಗವಾಗಿ ಕೊನೆ ಕೊನೆಗೆ, ಅದರ ಪ್ರಮಾಣ ಏರಿಸುತ್ತ ಬಂದು ಒಂದು ದಿನ ಶಾಶ್ವತವಾಗಿ ರಾಕ್ಷಸನಾಗಿಯೇ ಉಳಿಯುವ ದ್ರಾವಕ ಕುಡಿಸಿದರೆ ಆ ನರ ಪಶುವನ್ನು ಮತ್ತೆ ದಾರಿಗೆ ತರಲು ಕೊಲೆಯೊಂದೇ ಗತಿಹೊರತು ಉಳಿದುದೇನೂ ಇಲ್ಲ. ಆದರೆ ಇಂಥ ಹಿಂಸ್ರಮನುಷ್ಯ ನಾವು ಹೇಳಿದಂತೆ ಕೇಳಿಯಾನು ಎಂಬುವುದಕ್ಕೆ ಆಧಾರವಿಲ್ಲ"

"ಅದನ್ನು ಶಿಕ್ಷಣದಲ್ಲಿ ದಾರಿಗೆ ತರಬೇಕು ಹುಲಿ, ಸಿಂಹವನ್ನು ನಾವು ದಾರಿಗೆ ತರುತ್ತಿಲ್ಲವೇ ? ಹಾಗೆ" "ಪ್ರಯತ್ನಿಸೋಣ. ಮಹಾರಾಣಿ ಆದರೆ ಅದಕ್ಕೆ ಜನ ವಸತಿಯಿಲ್ಲದ ಗೊಂಡಾರಣ್ಯವಾಗಬೇಕು.

ಆ ಶಿಶುವಿನ ಸುತ್ತ ಮುಖವಾಡ ಹಾಕಿದ ಮನುಷ್ಯರೇ ಸುಳಿಯಬೇಕು. ಅದು ಮನುಷ್ಯ ಪ್ರಪಂಚದಿಂದ ಬೇರೆಯಾಗಿರಬೇಕು. ಆದರೆ ಒಂದು ಮಾತು ಹೇಳಬಲ್ಲೆ ಇಂಥ ವ್ಯಕ್ತಿ ಕೊನೆಗೆ ನಮಗೇ ಅಪಾಯ ತಂದರೂ ತರಬಹುದು"

"ಹಾಗಾದಾಗ ಅದನ್ನು ದಾರಿಗೆ ಹಚ್ಚಲು ನಮಗೂ ಗೊತ್ತಿದೆ ಪಂಡಿತರೇ. ಅಂಥ ವ್ಯಕ್ತಿಯೊಂದರ ಸೃಷ್ಟಿಯಾಗಲಿ ಅದಕ್ಕೆ ಬೇಕಾಗುವ ಯಾವತ್ತೂ ವಸ್ತುಗಳನ್ನು ತಿಳಿಸಿರಿ."

"ಈಗ ಮೊದಲನೆಯದಾಗಿ ಪ್ರಶಸ್ತ ಸ್ಥಳ. ಆ ಮೇಲೆ ಹುಟ್ಟಲಿರುವ ಮಗುವಿನ ತಾಯಿ ತಂದೆ ಇವರಿಬ್ಬರೂ ಬದುಕುಳಿಯಲಾರರು. ಔಷಧಕ್ಕಾಗಿ, ಅದನ್ನು ಅರಸಲು ಒಂದಿಷ್ಟು ಜನ" ಎಂದು ಹೇಳಿದ ಪಂಡಿತ.

"ಅಷ್ಟೆಲ್ಲವನ್ನೂ ನಿಮಗೆ ಒದಗಿಸಿ ಕೊಡಲಾಗುವುದು. ನೀವು ಕಾರ್ಯದಲ್ಲಿ ಜಯಶೀಲರಾಗುವುದು ಖಂಡಿತವಲ್ಲವೇ ?" ರಾಣಿ ಚಾವಟಿಯನ್ನು ಝಳಪಿಸಿದಂತೆ ಕೇಳಿದಳು.

"ಹೌದು ಮಹಾರಾಣಿ ಆಗಬಲ್ಲೆ. ಆ ಧನ್ವಂತರಿಯ ಕೃಪೆಯೊಂದಿದ್ದರೆ ನೀವು ಹೇಳಿದ್ದರಿಂದಲೂ ಮಿಗಿಲಾದ ಕ್ರೂರ ಮನುಷ್ಯನೊಬ್ಬನನ್ನು ಔಷಧದ ಪ್ರಭಾವದಿಂದಲೇ ಕಾಣಿಸಿಕೊಡಬಲ್ಲೆ" ದೃಢ ನಿಶ್ಚಯದಿಂದ ಹೇಳಿದ ಪಂಡಿತ.



"ಇದರಲ್ಲಿ ರಾಷ್ಟ್ರಕ್ಕೊಂದು ಶಕ್ತಿಯನ್ನು ದಯಪಾಲಿಸಿದ ನಿಮಗೆ ಕೀರ್ತಿಯೂ ಇದೆ. ಅಲ್ಲದೆ ಹೆಚ್ಚಿನ ಪುರಸ್ಕಾರವನ್ನೂ ನಮ್ಮ ರಾಜ್ಯದ ಜನತೆ ನಿಮಗೆ ನೀಡುತ್ತದೆ" ಎಂದಳು ರಾಣಿ.

"ತಾವು ತಾಳ್ಮೆಯಿಂದಿರಬೇಕು. ನಮಗೆ ಬೇಕಾದ ಸಾಹಿತ್ಯಗಳನ್ನು ಹಿಂದು ಮುಂದು ನೋಡದೆ ಒದಗಿಸಿ ಕೊಡಬೇಕು. ವಾರಕ್ಕೊಮ್ಮೆ ಬಂದು ನನ್ನ ಕಾರ್ಯದ ಕಡೆಗೆ ಗಮನ ಹರಿಸಿ ಹೋಗಬೇಕು. ಮುಂದೆ ತಮ್ಮ ಇಚ್ಛೆಯಂತೆ ಎಲ್ಲವೂ ನೆರವೇರುತ್ತದೆ. ಎಷ್ಟುಕ್ರೂರ ಬೇಕೊ ಅಷ್ಟು; ಎಷ್ಟು ಶಾಂತಬೇಕೊ ಅಷ್ಟು ಇರುವ ವೀರಪುಂಗವನೊಬ್ಬ ಜನ್ಮತಾಳುವುದನ್ನು ಪರಿಶೀಲಿಸಿರಿ. ಆದರೆ ನನ್ನದು ಔಷಧ ಪ್ರಭಾವ. ಒಮ್ಮೆಲೇ ಅದನ್ನು ಪ್ರಯೊಗಿಸಿ, ಅತಿ ಮಾನವನನ್ನಾಗಿ ಮಾಡಲು ಸಾಧ್ಯವಿಲ್ಲ. ಮಾಡಿದರೂಶಾಶ್ವತ ಕ್ರೂರತೆ ನಿಲ್ಲದು. ಸ್ವಲ್ಪ ಸ್ವಲ್ಪವಾಗಿ ಅವನನ್ನು ಕ್ರೂರತೆಯೆಡೆ ನಡೆಸಿಕೊನೆಗೆ ಮಹಾಕ್ರೂರ ಹಿಂಸ್ರಪಶುವಿನಂತೆ ಮಾಡುತ್ತೇನೆ" ಎಂದು ಭರವಸೆ ಕೊಟ್ಟಪಂಡಿತ.

ರಾಣಿಯ ಕನಸು ಇಂದು ನನಸಾಗಲು ಸಕಲ ಸನ್ನಾಹ ಸಿದ್ಧವಾದುದನ್ನು ಕಂಡು ಹರ್ಷಿಸಿ ತೃಪ್ತಿಯಿಂದ ನಕ್ಕು ಪಂಡಿತನನ್ನು ಬೀಳ್ಕೊಟ್ಟಳು. ಪಂಡಿತ ದಾಸಿ ಹಿಡಿದ ಹಿಲಾಲಿನ ಬೆಳಕಲ್ಲಿ ತನ್ನ ದಾರಿ ಅರಸುತ್ತ ಬಿಡಾರದತ್ತ ನಡೆದ.

ಆಗ ಝಾವದ ಕಹಳೆ ಬತೇರಿಯಿಂದ ಮೊಳಗುವುದನ್ನು ಕೇಳಿದ ರಾಣಿ ನೆಮ್ಮದಿಯಿಂದ ನಿದ್ರಿಸಲು ಯತ್ನಿಸಿದಳು.

---

**ಆಜೀವ ಸದಸ್ಯರುಗಳಲ್ಲಿ ಒಂದು ಮನವಿ.**

ಸಿದ್ಧಗಂಗಾ ಪತ್ರಿಕೆಯ ಅನೇಕ ಆಜೀವ ಸದಸ್ಯರುಗಳ ವಿಳಾಸಗಳು ಬದಲಾಗಿರುವುದರಿಂದ ಕಾರ್ಯಾಲಯದಿಂದ ಕಳುಹಿಸಿದ ಪತ್ರಿಕೆಗಳು ಅವರುಗಳಿಗೆ ತಲುಪದೆ ಹಿಂತಿರುಗುತ್ತಿವೆ. ದಯವಿಟ್ಟು ನಿಮ್ಮ ಬದಲಾದ ವಿಳಾಸಗಳನ್ನು ಆಗಿಂದಾಗ್ಗೆ ಪತ್ರಿಕಾ ಕಾರ್ಯಾಲಯಕ್ಕೆ ಕಳುಹಿಸಿ ಕೊಡುವುದರ ಮುಖೇನ "ಸಿದ್ಧಗಂಗಾ" ನಿಮಗೆ ಸುಗಮವಾಗಿ ತಲುಪಲು ನಮ್ಮೊಂದಿಗೆ ಸಹಕರಿಸಲು ಪ್ರಾರ್ಥನೆ. ತಮ್ಮ ಸದಸ್ಯತ್ವದ ನಂಬರನ್ನು ತಪ್ಪದೇ ತಿಳಿಸಿರಿ.

ಪ್ರಕಾಶಕರು.

" ಮನುಷ್ಯ ಯಾವಾಗಲೂ ಕ್ರೂರನಾಗಿಯೇ ಇರಬೇಕು. ಅವನು ಹಿಂಸ್ರ ಪಶುವಿನಂತಿರಬೇಕು. ನಮ್ಮ ಕೈಯ ಮಾರಕ ಶಸ್ತ್ರದಂತಿರಬೇಕು. ಅಂಥವನನ್ನು ನೀವು ಸೃಷ್ಟಿಸುತ್ತೀರಾ ? "

" ಔಷಧಿ ಪ್ರಯೋಗದಿಂದ ಅದನ್ನೂ ಮಾಡಬಲ್ಲೆ ಮಹಾರಾಣಿ ಆದರೆ ಗರ್ಭಸ್ಥ ಶಿಶುವಿಗೆ ಔಷಧ ಪ್ರಯೋಗವ ಗಿ ಕೊನೆ ಕೊನೆಗೆ, ಅದರ ಪ್ರಮಾಣ ಏರಿಸುತ್ತ ಬಂದು ಒಂದು ದಿನ ಶಾಶ್ವತವಾಗಿ ರಾಕ್ಷಸನಾಗಿಯೇ ಉಳಿಯುವ ದ್ರಾವಕ ಕುಡಿಸಿದರೆ ಆ ನರ ಪಶುವನ್ನು ಮತ್ತೆ ದಾರಿಗೆ ತರಲು ಕೊಲೆಯೊಂದೇ ಗತಿಹೊರತು ಉಳಿದುದ್ದೇದೂ ಇಲ್ಲ. ಆದರೆ ಇಂಥ ಹಿಂಸ್ರಮನುಷ್ಯ ನಾವು ಹೇಳಿದಂತೆ ಕೇಳಿಯಾನು ಎಂಬುವುದಕ್ಕೆ ಆಧಾರವಿಲ್ಲ "

" ಅದನ್ನು ಶಿಕ್ಷಣದಲ್ಲಿ ದಾರಿಗೆ ತರಬೇಕು ಹುಲಿ, ಸಿಂಹವನ್ನು ನಾವು ದಾರಿಗೆ ತರುತ್ತಿಲ್ಲವೇ ? ಹಾಗೆ" " ಪ್ರಯತ್ನಿಸೋಣ. ಮಹಾರಾಣಿ ಆದರೆ ಅದಕ್ಕೆ ಜನ ವಸತಿಯಿಲ್ಲದ ಗೊಂಡಾರಣ್ಯವಾಗಬೇಕು.

ಆ ಶಿಶುವಿನ ಸುತ್ತ ಮುಖವಾಡ ಹಾಕಿದ ಮನುಷ್ಯರೇ ಸುಳಿಯಬೇಕು. ಅದು ಮನುಷ್ಯ ಪ್ರಪಂಚದಿಂದ ಬೇರೆಯಾಗಿರಬೇಕು. ಆದರೆ ಒಂದು ಮಾತು ಹೇಳಬಲ್ಲೆ ಇಂಥ ವ್ಯಕ್ತಿ ಕೊನೆಗೆ ನಮಗೇ ಅಪಾಯ ತಂದರೂ ತರಬಹುದು "

" ಹಾಗಾದಾಗ ಅದನ್ನು ದಾರಿಗೆ ಹಚ್ಚಲು ನಮಗೂ ಗೊತ್ತಿದೆ ಪಂಡಿತರೇ. ಅಂಥ ವ್ಯಕ್ತಿಯೊಂದರ ಸೃಷ್ಟಿಯಾಗಲಿ ಅದಕ್ಕೆ ಬೇಕಾಗುವ ಯಾವತ್ತೂ ವಸ್ತುಗಳನ್ನು ತಿಳಿಸಿರಿ "

" ಈಗ ಮೊದಲನೆಯದಾಗಿ ಪ್ರಶಸ್ತ ಸ್ಥಳ. ಆ ಮೇಲೆ ಹುಟ್ಟಲಿರುವ ಮಗುವಿನ ತಾಯಿ ತಂದೆ ಇವರಿಬ್ಬರೂ ಬದುಕುಳಿಯಲಾರರು. ಔಷಧಕ್ಕಾಗಿ, ಅದನ್ನು ಅರಸಲು ಒಂದಿಷ್ಟು ಜನ " ಎಂದು ಹೇಳಿದ ಪಂಡಿತ.

" ಅಷ್ಟೆಲ್ಲವನ್ನೂ ನಿಮಗೆ ಒದಗಿಸಿ ಕೊಡಲಾಗುವುದು. ನೀವು ಕಾರ್ಯದಲ್ಲಿ ಜಯಶೀಲರಾಗುವುದು ಖಂಡಿತವಲ್ಲವೇ ? " ರಾಣಿ ಚಾವಟಿಯನ್ನು ಝಳಪಿಸಿದಂತೆ ಕೇಳಿದಳು.

" ಹೌದು ಮಹಾರಾಣಿ ಆಗಬಲ್ಲೆ. ಆ ಧನ್ವಂತರಿಯ ಕೃಪೆಯೊಂದಿದ್ದರೆ ನೀವು ಹೇಳಿದ್ದರಿಂದಲೂ ಮಿಗಿಲಾದ ಕ್ರೂರ ಮನುಷ್ಯನೊಬ್ಬನನ್ನು ಔಷಧದ ಪ್ರಭಾವದಿಂದಲೇ ಕಾಣಿಸಿಕೊಡಬಲ್ಲೆ " ದೃಢ ನಿಶ್ಚಯದಿಂದ ಹೇಳಿದ ಪಂಡಿತ.



"ಇದರಲ್ಲಿ ರಾಷ್ಟ್ರಕ್ಕೊಂದು ಶಕ್ತಿಯನ್ನು ದಯಪಾಲಿಸಿದ ನಿಮಗೆ ಕೀರ್ತಿಯೂ ಇದೆ. ಅಲ್ಲದೆ ಹೆಚ್ಚಿನ ಪುರಸ್ಕಾರವನ್ನೂ ನಮ್ಮ ರಾಜ್ಯದ ಜನತೆ ನಿಮಗೆ ನೀಡುತ್ತದೆ" ಎಂದಳು ರಾಣಿ.

" ತಾವು ತಾಳ್ಮೆಯಿಂದಿರಬೇಕು. ನಮಗೆ ಬೇಕಾದ ಸಾಹಿತ್ಯಗಳನ್ನು ಹಿಂದು ಮುಂದು ನೋಡದೆ ಒದಗಿಸಿ ಕೊಡಬೇಕು ವಾರಕ್ಕೊಮ್ಮೆ ಬಂದು ನನ್ನ ಕಾರ್ಯದ ಕಡೆಗೆ ಗಮನ ಹರಿಸಿ ಹೋಗಬೇಕು. ಮುಂದೆ ತಮ್ಮ ಇಚ್ಛೆಯಂತೆ ಎಲ್ಲವೂ ನೆರವೇರುತ್ತದೆ. ಎಷ್ಟುಕ್ರೂರ ಬೇಕೊ ಅಷ್ಟು; ಎಷ್ಟು ಶಾಂತಬೇಕೊ ಅಷ್ಟು ಇರುವ ವೀರಪುಂಗವನೊಬ್ಬ ಜನ್ಮತಾಳುವುದನ್ನು ಪರಿಶೀಲಿಸಿರಿ. ಆದರೆ ನನ್ನದು ಔಷಧ ಪ್ರಭಾವ. ಒಮ್ಮೆಲೇ ಅದನ್ನು ಪ್ರಯೊಗಿಸಿ, ಅತಿ ಮಾನವನ್ನಾಗಿ ಮಾಡಲು ಸಾಧ್ಯವಿಲ್ಲ. ಮಾಡಿದರೂಶಾಶ್ವತ ಕ್ರೂರತೆ ನಿಲ್ಲದು. ಸ್ವಲ್ಪ ಸ್ವಲ್ಪವಾಗಿ ಅವನನ್ನು ಕ್ರೂರತೆಯೆಡೆ ನಡೆಸಿಕೊನೆಗೆ ಮಹಾಕ್ರೂರ ಹಿಂಸ್ರಪಶುವಿನಂತೆ ಮಾಡುತ್ತೇನೆ " ಎಂದು ಭರವಸೆ ಕೊಟ್ಟಪಂಡಿತ.

ರಾಣಿಯ ಕನಸು ಇಂದು ನನಸಾಗಲು ಸಕಲ ಸನ್ನಾಹ ಸಿದ್ಧವಾದುದನ್ನು ಕಂಡು ಹರ್ಷಿಸಿ ತೃಪ್ತಿಯಿಂದ ನಕ್ಕು ಪಂಡಿತನನ್ನು ಬೀಳ್ಕೊಟ್ಟಳು. ಪಂಡಿತ ದಾಸಿ ಹಿಡಿದ ಹಿಲಾಲಿನ ಬೆಳಕಲ್ಲಿ ತನ್ನ ದಾರಿ ಅರಸುತ್ತ ಬಿಡಾರದತ್ತ ನಡೆದ.

ಆಗ ಝೂವದ ಕಹಳೆ ಬತೇರಿಯಿಂದ ಮೊಳಗುವುದನ್ನು ಕೇಳಿದ ರಾಣಿ ನೆಮ್ಮದಿಯಿಂದ ನಿದ್ರಿಸಲು ಯತ್ನಿಸಿದಳು.

---

**ಆಜೀವ ಸದಸ್ಯರುಗಳಲ್ಲಿ ಒಂದು ಮನವಿ.**

ಸಿದ್ಧಗಂಗಾ ಪತ್ರಿಕೆಯ ಅನೇಕ ಆಜೀವ ಸದಸ್ಯರುಗಳ ವಿಳಾಸಗಳು ಬದಲಾಗಿರುವುದರಿಂದ ಕಾರ್ಯಾಲಯದಿಂದ ಕಳುಹಿಸಿದ ಪತ್ರಿಕೆಗಳು ಅವರುಗಳಿಗೆ ತಲುಪದೆ ಹಿಂತಿರುಗುತ್ತಿವೆ. ದಯವಿಟ್ಟು ನಿಮ್ಮ ಬದಲಾದ ವಿಳಾಸಗಳನ್ನು ಆಗಿಂದಾಗ್ಗೆ ಪತ್ರಿಕಾ ಕಾರ್ಯಾಲಯಕ್ಕೆ ಕಳುಹಿಸಿ ಕೊಡುವುದರ ಮುಖೇನ "ಸಿದ್ಧಗಂಗಾ" ನಿಮಗೆ ಸುಗಮವಾಗಿ ತಲುಪಲು ನಮ್ಮೊಂದಿಗೆ ಸಹಕರಿಸಲು ಪ್ರಾರ್ಥನೆ. ತಮ್ಮ ಸದಸ್ಯತ್ವದ ನಂಬರನ್ನು ತಪ್ಪದೇ ತಿಳಿಸಿರಿ.

ಪ್ರಕಾಶಕರು.

## ಪರಮ ಪೂಜ್ಯ ಶ್ರೀ ಶ್ರೀ ಗಳವರ ಆಗಸ್ಟ್ ತಿಂಗಳ ಕಾರ್ಯಕ್ರಮ.

1-8-90 ಬೆಳಿಗ್ಗೆ ಸಿದ್ಧಗಂಗಾ ಆಡಿಟೋರಿಯಂನಲ್ಲಿ ತುಮಕೂರಿನ ಮುಂಡಿವರ್ತಕರು ಶ್ರೀ ಜಿ. ಎಂ. ಬಸಪ್ಪನವರ ಮೊಮ್ಮಗಳ ಲಗ್ನದಲ್ಲಿ ಭಾಗವಹಿಸಿ ಆಶೀರ್ವದಿಸಿದರು.
ಸಂಜೆ 7-15ಕ್ಕೆ ತುಮಕೂರು ಡಾ॥ ಹುಲಿನಾಯಕರ ನರ್ಸಿಂಗ್ ಹೋಮ್ ಪ್ರಾರಂಭೋತ್ಸವ.

2-8-90 ಬೆಂಗಳೂರು ಅಗ್ರಹಾರ ದಾಸರಹಳ್ಳಿ ನಂ. 27 4ನೇ ಮುಖ್ಯ ರಸ್ತೆ; 4 ನೇ ಅಡ್ಡ ರಸ್ತೆ, ಶ್ರೀ ಚನ್ನಪ್ಪನವರ ಮನೆಯಲ್ಲಿ ಪೂಜೆ.

3-8-90 ಬೈಯಂಡಹಳ್ಳಿ ಶ್ರೀ ಪರಮಶಿವಯ್ಯನವರ ಮನೆಯಲ್ಲಿ ಪೂಜೆ.

4-8-90 ಬೆಳಿಗ್ಗೆ 10ಕ್ಕೆ ತುಮಕೂರು ಅಕ್ಕಮಹಾದೇವಿ ಸಮಾಜದ ಕಾರ್ಯಕ್ರಮ.

5-8-90 ಬೆಂಗಳೂರು ಜಿಲ್ಲೆ, ಹೊಸಕೋಟೆ ಅಯೋಧ್ಯನಗರ ಶಿವಾಚಾರ ವೈಶ್ಯ ನಗರ್ತ ಸಂಘದವರು ಶ್ರೀ ಗಣಪತಿ ಶ್ರೀ ಪಾರ್ವತಿದೇವಿ ಶ್ರೀನಗರೇಶ್ವರ ಸ್ವಾಮಿಯವರ ಸಮಾರಂಭದ ಅಧ್ಯಕ್ಷತೆ.
ತುಮಕೂರು ಜಿಲ್ಲೆ ಕೊರಟಗೆರೆ ತಾ॥ ಪಾತಗಾನಹಳ್ಳಿ ಶ್ರೀ ಮಲ್ಲೇಶಯ್ಯನವರ ಹೊಸಮನೆ ಗೃಹಪ್ರವೇಶ ನಿಮಿತ್ತ ಪೂಜೆ.

6-8-90 ಬೆಳಿಗ್ಗೆ 10ಕ್ಕೆ ಎಸ್.ಐ.ಟಿ. 4ನೇ ವರ್ಷದ ಬಿ.ಇ. ವಿದ್ಯಾರ್ಥಿಗಳ ವಾರ್ಷಿಕ ಸಮಾರಂಭ.
ಸಂಜೆ 3-30ಕ್ಕೆ ಭಾರತ ಸೇವಾದಳ ಮತ್ತು ಶ್ರೀ ಬಸವೇಶ್ವರ ಆಂಗ್ಲ ಪಾಠಶಾಲೆ ಸಂಯುಕ್ತ ಆಶ್ರಯದಲ್ಲಿ ವಿದ್ಯಾರ್ಥಿ ಸಂಘದ ಉದ್ಘಾಟನೆ.
ಸಂಜೆ 6-30ಕ್ಕೆ ಶ್ರೀಕ್ಷೇತ್ರದ ಪ್ರಾರ್ಥನಾ ಸಭೆಯಲ್ಲಿ ಮೈಸೂರು ಬ್ಯಾಂಕ್ ಅಧಿಕಾರಿಗಳು, ಶ್ರೀ ಮಠದ ಕುರುಡು ಮಕ್ಕಳ ಶಾಲೆಯಲ್ಲಿ 10 ಮಕ್ಕಳನ್ನು ದತ್ತು ಪಡೆದು ವ್ಯಾಸಂಗಕ್ಕೆ ಸೌಲಭ್ಯ ನೀಡಿದ ಸಮಾರಂಭ ಅಧ್ಯಕ್ಷತೆ.

7-8-90 90-91ನೇ ಸಾಲಿನ ಶ್ರೀ ಮಠದ ಸಂಯುಕ್ತ ವಿದ್ಯಾರ್ಥಿ ಸಂಘ ಸನಿವಾಸ ಶಿಕ್ಷಣ ಸಂಸ್ಥೆಗಳ ಉದ್ಘಾಟನಾಸಮಾರಂಭಲ್ಲಿ ಆಶೀರ್ವಚನ.

8-8-90 ಬೆಂಗಳೂರು ಸಿ. ಉಮೇಪುರ ಪಾಕೇಗೌಡನಪಾಳ್ಯದಲ್ಲಿ ಶ್ರೀ ರಾಘವೇಂದ್ರ ಸಾರ್ವಭೌಮ ಟ್ರಸ್ಟ್ (ರಿ.)ನಲ್ಲಿ ಶ್ರೀ ಗುರುರಾಯರ ಬೃಂದಾವನ ಶಂಕುಸ್ಥಾಪನೆ ಕಾರ್ಯಕ್ರಮ.

9-8-90 ನೆಲಮಂಗಲ ತಾಲ್ಲೂಕು ಮಾದೇನಹಳ್ಳಿ, ದೊಡ್ಡಮನೆ ಗಂಗಾಧರಪ್ಪನವರ ಮನೆಯಲ್ಲಿ ಪೂಜೆ.

10-8-90 ಚಿಂತಾಮಣಿ ಎನ್.ಆರ್. ಬಡಾವಣೆಯಲ್ಲಿ ಶ್ರೀ ಕೆ. ಎಂ. ಮಂಜುನಾಥ್ ಇವರು ಹೊಸದಾಗಿ ಪ್ರಾರಂಭಿಸುವ ಮೆ॥ ಸುವರ್ಣ ಎಂಟರ್‌ಪ್ರೈಸಸ್ ಉದ್ಯಮದ ಆರಂಭೋತ್ಸವ.

11-8-90 ಮಾಗಡಿ ತಾಲ್ಲೂಕು ದೊಳ್ಳೇನಹಳ್ಳಿ - ಶ್ರೀ ಸಿದ್ಧಗಂಗಪ್ಪನವರು, ಹೊಸಮನೆಯ ಗೃಹಪ್ರವೇಶದ ಪೂಜೆ.
ನೆಲಮಂಗಲ ತಾ॥ ತಟ್ಟೇಕೆರೆ, ದಿವಂಗತ ಪಟೇಲ್ ಬಾಳೇಗೌಡರ, ಆರಾಧನ ಮತ್ತು ಶರಣಮೇಳದ ಅಧ್ಯಕ್ಷತೆ.

12-8-90 ಹುಣಸೂರು ತಾ॥ ಗಾವಡಗೆರೆ ಶ್ರೀ ಗುರುಲಿಂಗಜಂಗಮ ದೇವರ ಮಠದಲ್ಲಿ ಶ್ರೀ ಶ್ರೀ ನಂಜುಂಡಶಿವಮೂರ್ತಿಗಳ 15ನೇ ಗಣಾರಾಧನಾಮಹೋತ್ಸವ.

14-8-90 ಕನಕಪುರ ಶ್ರೀ ದೇಗುಲ ಮಠದಲ್ಲಿ ಬೆಂಗಳೂರು ಜಿಲ್ಲಾ ಪ್ರಥಮ ಶರಣ ಸಾಹಿತ್ಯ ಸಮ್ಮೇಳನದ ಉದ್ಘಾಟನೆ.

16-8-90 ಬೆಂಗಳೂರು ರಾಜಾಜಿನಗರ ಶಿವನಹಳ್ಳಿ ಶ್ರೀ ಎನ್. ಸಚ್ಚಿದಾನಂದಮೂರ್ತಿ ಮಾತಾ ಪಿತೃಗಳ ವಾರ್ಷಿಕ ಶಿವಗಣಾರಾಧನೆ ನಿಮಿತ್ತ ಪೂಜೆ.

17-8-90 ತುಮಕೂರು ತಾ॥ ಚೇಳೂರಿನಲ್ಲಿ ಕಾರ್ಯಕ್ರಮ.
ತುಮಕೂರು ಜಯದೇವ ಹಾಸ್ಟಲ್ ಕಾರ್ಯಕ್ರಮ. ಕೆ.ಆರ್. ನಗರ ದೊಡ್ಡಮಾರನಗೊಂಡಹಳ್ಳಿ ಮಠದ ಪಟ್ಟಾಭಿಷೇಕ ಮಹೋತ್ಸವ.

18-8-90 ತರೂರು ಸಿದ್ಧಗಂಗಾ ಪ್ರೌಢಶಾಲಾ ಕಟ್ಟಡದ ಆರಂಭೋತ್ಸವ.
ಬೆಂಗಳೂರು ಶ್ರೀ ಲಕ್ಷ್ಮಿಲಾಡ್ಜ್ ಶ್ರೀ ಬಸವರಾಜ್‌ರವರ ಮನೆಯಲ್ಲಿಪೂಜೆ.

19-8-90 ಬೆಳಿಗ್ಗೆ ಶ್ರೀ ಮಠದಲ್ಲಿ ಹಳೆಯ ವಿದ್ಯಾರ್ಥಿಗಳ ಸಂಘದ ವಿಶೇಷ ಸರ್ವ ಸದಸ್ಯರ ಅಧಿವೇಶನದಲ್ಲಿ ಅಧ್ಯಕ್ಷತೆ.
ಸಂಜೆ 5.ಕ್ಕೆ ಬೆಂಗಳೂರು ಶ್ರೀ ಸರ್ಪಭೂಷಣ ಶಿವಯೋಗೀಶ್ವರಮಠದಲ್ಲಿ ವಿಶೇಷ ಉಪನ್ಯಾಸಮಾಲೆಯ ಮುಕ್ತಾಯ ಸಮಾರಂಭದ ಅಧ್ಯಕ್ಷತೆ.

22-8-90 ಅವೇನಹಳ್ಳಿ ದೇವಸಂದ್ರದಲ್ಲಿ ಶಾಲಾ ಕಟ್ಟಡದ ಉದ್ಘಾಟನೆ.

23-8-90 ಎಸ್.ಐ.ಟಿ.ಯಲ್ಲಿ ಮ್ಯಾಕಾನಿಕಲ್ ವಿಭಾಗದ ವಿದ್ಯಾರ್ಥಿಗಳ ಸಮಾವೇಶ ಸಮಾರಂಭದಲ್ಲಿ.

25-8-90 ತುಮಕೂರು ಬಿ. ಎಲ್. ಸಿದ್ದಯ್ಯನವರ ಮನೆಯಲ್ಲಿ ಪೂಜೆ.

26-8-90 ಬೆಂಗಳೂರಿನ, ಆಡಿಟರ್ ಶಿವಲಿಂಗಯ್ಯನವರ ಮನೆಯಲ್ಲಿ ಪೂಜೆ.

## ಹಳೆಯ ವಿದ್ಯಾರ್ಥಿ ಸಂಘದ ಆಜೀವ ಸದಸ್ಯತ್ವ ಪಟ್ಟಿ :--

ಸರ್ವಶ್ರೀ

362 ಗುರುನಂಜಯ್ಯ
ನಂ 39, 9 ನೇ ಮುಖ್ಯ ರಸ್ತೆ 4 ನೇ ಅಡ್ಡರಸ್ತೆ, ವಿಜಯನಗರ ಎರಡನೇ ಹಂತ, ಆರ್. ಪಿ. ಸಿ ಲೇಔಟ್ ಬೆಂಗಳೂರು - 560040

363 ಎಲ್. ರಾಜಪ್ಪ. ಕಂಟ್ರಾಕ್ಟರ್
ನಂ 924, 4ನೇ ಬ್ಲಾಕ್ 2ನೇ ಮುಖ್ಯ ರಸ್ತೆ ರಾಜಾಜಿನಗರ ಬೆಂಗಳೂರು-560010

364 ಡಿ. ರೇವಣ್ಣ ಸಿದ್ದಯ್ಯ ಕಂಟ್ರಾಕ್ಟರ್
ನಂ 960, 4ನೇ ಬ್ಲಾಕ್, ರಾಜಾಜಿನಗರ, ಬೆಂಗಳೂರು-560010

365 ಡಿ. ಗಂಗಾಧರಯ್ಯ
ನಂ. 483, 2ನೇ ಕ್ರಾಸ್, 8ನೇ ಮುಖ್ಯ ರಸ್ತೆ, ವಿಜಯನಗರ ಬೆಂಗಳೂರು-560040.

366 ಕೆ. ಎಸ್. ಶಿವಣ್ಣ
ನಂ. 382/ಎಚ್ 9ನೇ 'ಹೆಚ್' ಮುಖ್ಯ ರಸ್ತೆ, ವಿಜಯನಗರ ಬೆಂಗಳೂರು-560040.

367 ಪಿ. ಎಸ್. ಸಿದ್ಧಗಂಗಯ್ಯ
ನಂ. 27 ಕೃಷ್ಣಪ್ಪ ಲೇಔಟ್, ವಿಜಯನಗರ, ಬೆಂಗಳೂರು-56004.

368 ಪಿ. ವಿ. ಗಂಗಣ್ಣ
ನಂ. 2373/"ಡಿ" ಮೊದಲನೇ 'ಎ' ಮುಖ್ಯ ರಸ್ತೆ ಆರ್.ಪಿ.ಸಿ. ಲೇಔಟ್

369 ಕೆ. ಆರ್. ವಿರೂಪಾಕ್ಷಯ್ಯ
ನಂ. 1687, 7ನೇ ಅಡ್ಡ ರಸ್ತೆ, 6ನೇ ಮುಖ್ಯ ರಸ್ತೆ, ಆರ್.ಪಿ.ಸಿ. ಲೇಔಟ್ ವಿಜಯನಗರ ಬೆಂಗಳೂರು-56004.

370 ಪಾಲಕ್ಷ
ನಂ. 291 2ನೇ ಕ್ರಾಸ್, 8ನೇ ಮುಖ್ಯ ರಸ್ತೆ, ವಿಜಯನಗರ ಬೆಂಗಳೂರು-560040.

271 ಹೆಚ್. ವಿ. ಸಿದ್ದಗಂಗಯ್ಯ
ನಂ. 678, 6ನೇ ಮುಖ್ಯ ರಸ್ತೆ, 2ನೇ ಕ್ರಾಸ್ ವಿಜಯನಗರ ಬೆಂಗಳೂರು-560040.

ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಮುದ್ರಣಾಲಯ, ಶ್ರೀ ಸಿದ್ಧಗಂಗಾ ಮಠ

"SIDDAGANGA" MONTHLY Reg.No. KRNO-9